# ನವೋದಯ ಕಾದಂಬರಿಗಳಲ್ಲಿ ಮತಾಂತರದ ಚರ್ಚೆ

ಕನ್ನಡ ವಿಶ್ವವಿದ್ಯಾಲಯಕ್ಕೆ
ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ

ಶ್ವೇತಾಮಣಿ ಎಚ್.ಎಂ.
ಸಂಶೋಧನಾ ವಿದ್ಯಾರ್ಥಿ



ಡಾ॥ ಎಂ.ಎಸ್.ಆಶಾದೇವಿ
ಮಾರ್ಗದರ್ಶಕರು

ಕಾವ್ಯಮಂಡಲ, ಬೆಂಗಳೂರು ಶಾಖೆ.
ಅಧ್ಯಯನಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ




೨೦೦೯

## ಪ್ರಮಾಣ ಪತ್ರ

## ನವೋದಯ ಕಾದಂಬರಿಗಳು

**ಮತಾಂತರದ ಚರ್ಚೆ** ಎಂಬ ಶೀರ್ಷಿಕೆಯ ನಿಬಂಧವನ್ನು ಡಾ॥ ಎಂ.ಎಸ್. ಆಶಾದೇವಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಅಧ್ಯಯನಾಂಗಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಈ ನಿಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಶ್ವೇತಾಮಣಿ ಎಚ್.ಎಂ.**
ಎಂ.ಫಿಲ್. ವಿದ್ಯಾರ್ಥಿನಿ,
ಕಾವ್ಯಮಂಡಲ
ಬೆಂಗಳೂರು.

ದಿನಾಂಕ : ೨೪/೦೧/೨೦೦೧
ಸ್ಥಳ : ಬೆಂಗಳೂರು

## ದೃಢೀಕರಣ ಪತ್ರ

**ಶ್ವೇತಾಮಣಿ ಎಚ್.ಎಂ.** ಇವರು **ನವೋದಯ ಕಾದಂಬರಿಗಳಲ್ಲಿ ಮತಾಂತರದ ಚರ್ಚೆ** ಎಂಬ ಶೀರ್ಷಿಕೆಯ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ, ಅಧ್ಯಯನಾಂಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಈ ನಿಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಎಂ. ಎಸ್. ಆಶಾದೇವಿ

**ಡಾ॥ ಎಂ.ಎಸ್.ಆಶಾದೇವಿ**
ಮಾರ್ಗದರ್ಶಕರು
ಆಯ್ಕೆ ಶ್ರೇಣಿ ಉಪನ್ಯಾಸಕರು
ಮಹಾರಾಣಿ ಮಹಿಳಾ ವಿಜ್ಞಾನ
ಕಾಲೇಜು, ಶೇಷಾದ್ರಿ ರಸ್ತೆ,
ಬೆಂಗಳೂರು.

ದಿನಾಂಕ : ೨೮/೦೯/೨೦೦೯
ಸ್ಥಳ : ಬೆಂಗಳೂರು

## ಪರಿವಿಡಿ

# ಅಧ್ಯಾಯ-೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

'ಮತಾಂತರ' ವರ್ತಮಾನದಲ್ಲಿ ಹೆಚ್ಚು ವಿವಾದಕ್ಕೊಳಗಾಗಿರುವ ಹಾಗೂ ಚರ್ಚೆಗೊಳ್ಳುತ್ತಿರುವ ವಿಷಯ. ಪ್ರಸ್ತುತ ಈ ಚರ್ಚೆಯನ್ನು ಹತ್ತೊಂಬತ್ತು ಮತ್ತು ಇಪ್ಪತ್ತನೇ ಶತಮಾನಗಳ ವಸಾಹತುಶಾಹಿ ಮತ್ತು ಮಧ್ಯಕಾಲೀನ ಕಾಲಘಟ್ಟಗಳ ಹುನ್ನಾರಗಳಲ್ಲಿ ಒಂದೆಂದು ಪರಿಭಾವಿಸಲಾಗುತ್ತಿದೆ. ಭಾರತದ ಮೇಲೆ ದಾಳಿಗಳನ್ನು ಮಾಡಿದ ಮುಸ್ಲಿಮರು ಇಲ್ಲಿನ ಜನಸಮುದಾಯಗಳನ್ನು ಮಧ್ಯಕಾಲೀನ ಯುಗದಲ್ಲಿ 'ಇಸ್ಲಾಂ' ಧರ್ಮಕ್ಕೆ ಪರಿವರ್ತನೆ ಮಾಡುವ ಕೆಲಸ ಮಾಡಿದರು. ಅನಂತರದಲ್ಲಿ ಭಾರತಕ್ಕೆ ಬಂದ ವಸಾಹತುಶಾಹಿಗಳು ಇಲ್ಲಿನ ಜನರನ್ನು 'ಕ್ರೈಸ್ತ' ಧರ್ಮಕ್ಕೆ ಮತಾಂತರ ಮಾಡುವ ಕೆಲಸ ಮಾಡಿದರು. ಈ ಎರಡು ಪ್ರಕ್ರಿಯೆಗಳಲ್ಲಿ ಭಾರತೀಯ 'ಹಿಂದೂ' ಧರ್ಮವನ್ನು ನಿರ್ನಾಮಗೊಳಿಸಿ ತಮ್ಮ ಧರ್ಮಗಳನ್ನು ನೆಲೆಗೊಳಿಸುವ ಕೆಲಸ ಮಾಡಿದರು. ಈ ಹಿನ್ನೆಲೆಯು ಭಾರತದಲ್ಲಿ ಮತಾಂತರ ಚರಿತ್ರೆಗೆ ಕಾರಣ ಎಂದು ಅರ್ಥೈಸಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ಮತಾಂತರದ ಚರ್ಚೆಯನ್ನು ನವೋದಯ ಕಥನ ಸಾಹಿತ್ಯ ಹೇಗೆ ಒಳಗೊಂಡಿದೆ ಎಂಬುದನ್ನು ಅಧ್ಯಯನದ ವಸ್ತುವನ್ನಾಗಿಸಿ ಕೊಳ್ಳಲಾಗಿದೆ. ಯಾಕೆಂದರೆ "ಸಾಮಾನ್ಯವಾಗಿ ಯಾವುದೇ ಕಾಲದ ಅನುಭವಗಳನ್ನು ಅಥವಾ ಸಮಾಜ ರಾಷ್ಟ್ರಗಳ ಕುರಿತ ಸಂಗತಿಗಳನ್ನು ಆಯಾ ಕಾಲದ ಸಾಹಿತ್ಯಿಕ ಚಳುವಳಿಗಳಲ್ಲಿ ನಿರೀಕ್ಷಿಸುವುದು ಸಾಮಾನ್ಯ ಕ್ರಮ. ಸಾಮಾಜಿಕ ಸನ್ನಿವೇಶಗಳು ನೇರವಾಗಿ ದಾಖಲಾಗುವುದ ಬರವಣಿಗೆಯಂತಹ ಮಾಧ್ಯಮಗಳಲ್ಲಿ ಸಾಹಿತ್ಯ ಅಂದಂದಿನ ಜನಜೀವನದ ವರ್ತಮಾನಗಳನ್ನು ತನ್ನ ಗರ್ಭದೊಳಗೆ ಸೇರಿಸಿಕೊಂಡಿದ್ದರಿಂದಲೇ ಸಾಹಿತ್ಯದ ಅಧ್ಯಯನ ಸಮಕಾಲೀನ ನೆಲೆಯಾಗಿರುತ್ತದೆ"[೧]. ಹಾಗಾಗಿ ನವೋದಯ ಸಾಹಿತ್ಯ ತನ್ನ ಕಾಲಘಟ್ಟದ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಹೇಗೆ ದಾಖಲಿಸುತ್ತದೆ ಎಂಬುದನ್ನು ಅಧ್ಯಯನ ಮಾಡುವುದು ಮುಖ್ಯವೆನಿಸುತ್ತದೆ.

ಅಧ್ಯಯನಕ್ಕಾಗಿ ನವೋದಯ ಕಾದಂಬರಿಗಳನ್ನೇ ಆಯ್ಕೆ ಮಾಡಿಕೊಳ್ಳುವಲ್ಲಿ ಪ್ರಮುಖವಾಗಿ ಮೂರು ಉದ್ದೇಶಗಳಿವೆ. ಅವುಗಳೆಂದರೆ, ಒಂದು : ಪ್ರಸ್ತುತ ಮತಾಂತರದ ಚರ್ಚೆಯ ವಸಾಹತುಶಾಹಿ ಮೂಲಕ ಆರಂಭಗೊಂಡ ಕ್ರೈಸ್ತೀಕರಣವನ್ನು ಒತ್ತಿ ಹೇಳುತ್ತಿರುವುದು, ಎರಡು : ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮತಾಂತರಕ್ಕೆ ಪ್ರತಿಸ್ಪಂದಿಸಿದ ಮೊದಲ ಘಟ್ಟ ನವೋದಯ ಸಾಹಿತ್ಯವಾಗಿದೆ. ಮೂರು

: ವಸಾಹತುಶಾಹಿಯ ನೇರ ಅನುಭವಗಳು ನವೋದಯ ಸಾಹಿತ್ಯದಲ್ಲಿ ದಾಖಲಾಗಿವೆ. ವರ್ತಮಾನದಲ್ಲಿನ ಮತಾಂತರ ಪ್ರಕ್ರಿಯೆಗಳನ್ನು ವಿರೋಧಿಸುವ ಚಿಂತನೆಯು ತನ್ನ ಸ್ವದೇಶಿ, ಸ್ವಧರ್ಮ, ಸ್ವಸಂಸ್ಕೃತಿಗಳ ರಕ್ಷಣೆಯ ಪರಿಕಲ್ಪನೆಗಳು ಮತಾಂತರದ ಚರ್ಚೆಯಲ್ಲಿ ಬಳಕೆಯಾಗುತ್ತಿರುವುದನ್ನು ಕಾಣುತ್ತೇವೆ. ಈ ಪರಿಕಲ್ಪನೆಗಳು ನವೋದಯ ಸಾಹಿತ್ಯದಲ್ಲಿ ಹೇಗೆ ಬಳಕೆಗೊಂಡಿವೆ ಹಾಗೂ ಮತಾಂತರ ಪ್ರಕ್ರಿಯೆಗೆ ಇವು ಹೇಗೆ ಪ್ರತಿಸ್ಪಂದಿಸಿವೆ ಎಂಬುದನ್ನು ಗಮನಿಸಿದರೆ ವರ್ತಮಾನದ ಮತಾಂತರ ಚರ್ಚೆಗೆ ಹೊಸ ನೆಲೆಯೊಂದು ಸಿಗಬಹುದೆಂಬ ಮುಖ್ಯ ಉದ್ದೇಶವನ್ನು ಈ ಅಧ್ಯಯನ ಹೊಂದಿದೆ.

**ವಸಾಹತುಶಾಹಿಯ ಸ್ವರೂಪ**

ನವೋದಯ ಸಾಹಿತ್ಯದ ಹುಟ್ಟು ಮತ್ತು ಬೆಳವಣಿಗೆಗಳಲ್ಲಿ ವಸಾಹತುಶಾಹಿಯ ಪ್ರಭಾವವನ್ನು ದಟ್ಟವಾಗಿ ಕಾಣಬಹುದು. ಆದ್ದರಿಂದ ವಸಾಹತುಶಾಹಿಯ ಸ್ವರೂಪವನ್ನು ಗ್ರಹಿಸುವುದರಿಂದ ನವೋದಯ ಕಾಲಘಟ್ಟದ ಬರಹಗಾರರ ಮೇಲೆ ಉಂಟಾಗಿರುವ ಪ್ರಭಾವಗಳನ್ನು ಗುರ್ತಿಸಬಹುದಾಗಿದೆ.

ವಸಾಹತುಶಾಹಿಯ ಜನಾಂಗವನ್ನು ಶೋಷಿಸುವ ಅತ್ಯಂತ ದೊಡ್ಡ ಶಕ್ತಿಯೆಂದು ಅರ್ಥೈಸಲಾಗಿದೆ. The colonial system or principle now Freqused in the derogatory sense of an alleged policy of exploitation of backward of weak peoples by a large power. Colony ಎನ್ನುವುದು ಯಾವಾಗಲೂ ಪರಕೀಯವಾಗಿರುತ್ತದೆ ಮತ್ತು ಹೊರದೇಶಕ್ಕೆ ಅಥವಾ ಪರಿಚಯವಲ್ಲದ ಇನ್ನೊಂದು ಸ್ಥಳಕ್ಕೆ ಹೋಗಿ ಒಕ್ಕಲು ಮಾಡಿದ ನೆಲೆಯಾಗಿರುತ್ತದೆ. ism ಎಂದರೆ ನಿರ್ದಿಷ್ಟ ತತ್ವಸಿದ್ಧಾಂತ ಎಂದು ಹೇಳಲಾಗಿದೆ. ಯಾವಾಗಲೂ ಒಂದು ಘಟನೆ ಮತ್ತು ಸಾಮಾಜಿಕ ಸಂಗತಿಯೊಂದರಮೂಲಕ ಹುಟ್ಟಿಕೊಳ್ಳುತ್ತದೆ. ಅಂದರೆ ism ತನ್ನಷ್ಟಕ್ಕೆ ತಾನು ಸ್ವತಂತ್ರವಾದುದಲ್ಲ. ಅದಕ್ಕೊಂದು ನಿರ್ದಿಷ್ಟ ಕಾರಣವಿರಬೇಕು.... ಈ ಕಾರಣವೇ ಕ್ರಮೇಣವಾಗಿ ಸಮಾಜದಲ್ಲಿ ಒಂದು ದೊಡ್ಡ ಸಮಸ್ಯೆಯಾಗಿಯೂ, ಐಡಿಯಾಲಜಿಯಾಗಿಯೂ ರೂಪುಗೊಳ್ಳುತ್ತದೆ. Colonialism ರೂಪುಗೊಂಡಿದ್ದು ಕೂಡ ಇದೇ ಕ್ರಮದಲ್ಲಿ"[3]. ಇದು ವಸಾಹತುಶಾಹಿ ಎಂದರೇನು ? ಎಂದು ವಿವರಿಸಿಕೊಳ್ಳಲು ಸಹಾಯಕವಾಗುತ್ತದೆ.

ವಸಾಹತುಶಾಹಿಯೆಂಬುದು ಹೊರಗಿನ ಶಕ್ತಿಯೊಂದು ತನ್ನದಲ್ಲದ ಪ್ರದೇಶದ ಜನರನ್ನು ಎಲ್ಲಾ ರೀತಿಯಲ್ಲೂ ಶೋಷಿಸಿ ಆಳುವ ವ್ಯವಸ್ಥೆ. ಭಾರತದಲ್ಲಿ ಇಂತಹ ಒಂದು ವ್ಯವಸ್ಥೆಯನ್ನು ಯೂರೋಪಿಯನ್ನರ ಆಗಮನದಿಂದ ಗುರ್ತಿಸಲಾಗುತ್ತದೆ. ಕೆಲವು ವಿದ್ವಾಂಸರು ಆರ್ಯನ್ನರ ಇತಿಹಾಸವೂ ಭಾರತೀಯ ಸಂದರ್ಭದಲ್ಲಿ ಇದೇ ಮಾದರಿಯದು ಎಂದು ಗುರ್ತಿಸುತ್ತಾರೆ. ಆರ್ಯರ ಇತಿಹಾಸವು ಇದೇ ಮಾದರಿಯದು ಇರಬಹುದಾದರೂ ಇಲ್ಲಿ ಯೂರೋಪಿಯನ್ನರ ಆಗಮನದ ವಸಾಹತುಶಾಹಿ ಸ್ವರೂಪವನ್ನು ಅಧ್ಯಯನದ ಅನುಕೂಲತೆಗಾಗಿ ಗುರ್ತಿಸಿಕೊಳ್ಳಲಾಗಿದೆ. ಭಾರತೀಯ ಚರಿತ್ರೆಯಲ್ಲಿಕ ಆರ್ಯರು ಮತ್ತು ಯೂರೋಪಿಯನ್ನರಂತೆ ಮಧ್ಯಕಾಲೀನ ಮೊಘಲರ ದಾಳಿಗಳನ್ನು ವಸಾಹತುಶಾಹಿ ಎಂದು ಗುರ್ತಿಸುವುದಿಲ್ಲ. ಯಾಕೆಂದರೆ ವಸಾಹತುಶಾಹಿ ಎನ್ನುವುದು "ನಿರ್ದಿಷ್ಟ ಸಂಕಥನಗಳು, ಪರಿಭಾಷೆ, ಧರ್ಮ, ಸಂಸ್ಕೃತಿ, ಯಜಮಾನಿಕೆ, ವ್ಯಾಪಾರ, ಶಿಕ್ಷಣ, ಆಧುನಿಕ ವಿಜ್ಞಾನ, ಅದೃಶ್ಯ ನಿಯಂತ್ರಣ ಇವೆಲ್ಲವೂ ಕೂಡಿ ರೂಪುಗೊಂಡ ವ್ಯವಸ್ಥೆ. ಆದ್ದರಿಂದಲೇ ಚರಿತ್ರೆಯುದ್ದಕ್ಕೂ ನಡೆದಿರುವ ಅನ್ಯದೇಶಗಳ ಆಕ್ರಮಣಕ್ಕೂ, ಒಂದು ನಾಡಿನ ಎಲ್ಲ ಅಂಗಗಳನ್ನೂ ವ್ಯಾಪಿಸುವ ಆಧುನಿಕ ವಸಾಹತೀಕರಣಕ್ಕೂ ವ್ಯತ್ಯಾಸವಿದೆ"[೩]. ಮುಸ್ಲಿಂ ದಾಳಿಗಳನ್ನು ಕಂಡ ಭಾರತಕ್ಕೆ ಮೇಲಿನ ಲಕ್ಷಣಗಳೆಲ್ಲ ಅನ್ವಯಿಸುವುದಿಲ್ಲ. ಈ ಅಧ್ಯಯನದ ಸಾಹಿತ್ಯದ ಚೌಕಟ್ಟು ನವೋದಯ ಕಾಲಘಟ್ಟದ್ದಾಗಿರುವುದರಿಂದ ಯೂರೋಪಿಯನ್ನರ ಆಗಮನದ ವಸಾಹತುಶಾಹಿ ಸ್ವರೂಪವನ್ನು ಅಧ್ಯಯನಕ್ಕಾಗಿ ಗುರ್ತಿಸಿಕೊಳ್ಳಲಾಗಿದೆ. ಆದರೆ ಮತಾಂತರದ ಚರಿತ್ರೆಯನ್ನು ಅಧ್ಯಯನಮಾಡುವಾಗ ಆರ್ಯನ್ನರ ಕಾಲಘಟ್ಟವೂ ಆಧುನಿಕ ವಸಾಹತುಶಾಹಿ ಲಕ್ಷಣಗಳನ್ನು ಒಳಗೊಂಡಿದೆ ಎಂದು ಈ ಅಧ್ಯಯನ ನಂಬುತ್ತದೆ.

ವಸಾಹತುಶಾಹಿ ವ್ಯವಸ್ಥೆಯು ಯೂರೋಪಿಯನ್ ಪುನರುಜ್ಜೀವನ ಘಟ್ಟ ಹಾಗೂ ಬಂಡವಾಳಶಾಹಿ ಯುಗದ ಆರಂಭದಲ್ಲಿ ರೂಪುಗೊಂಡ ಒಂದು ವ್ಯವಸ್ಥೆ. ಇದು ಮೂಲತಃ ಯಜಮಾನಿಕೆಯ ವ್ಯವಸ್ಥೆ. ಯೂರೋಪಿಯನ್ನರು ಕೈಗೊಂಡ ಭೌಗೋಳಿಕ ಅನ್ವೇಷಣೆಗಳ ಫಲವಾಗಿ ಜಗತ್ತಿನಾದ್ಯಂತ ವಸಾಹತುಗಳ ರೂಪುಗೊಂಡವು. ಯೂರೋಪಿಯನ್ನರು ಅವುಗಳನ್ನು ಆಳುವ ಪ್ರಭುಗಳಾದರು. ಹಾಗೂ ಅಲ್ಲಿನ ಮೂಲ ವ್ಯವಸ್ಥೆಯನ್ನು ಬದಲಿಸಿ ಹೊಸ ನಾಗರಿಕತೆಯನ್ನು ರೂಪಿಸುವ ವಕ್ತಾರರಾದರು. ಇಲ್ಲಿ ವಸಾಹತುಶಾಹಿಗಳಿಗೆ ಇದ್ದ ಈ ನಾಗರಿಕತೆ ರೂಪಿಸುವ ಗುಣ ತನ್ನ ಸಂಸ್ಕೃತಿ ಶ್ರೇಷ್ಠ ಎಂಬ ಮನೋಧರ್ಮದ್ದು. ಈ ಶ್ರೇಷ್ಠತೆಯ

ಅಂಶವನ್ನೇ ಪರಕೀಯ ದೇಶಗಳನ್ನು, ಆಳುವ ತಂತ್ರವಾಗಿಯೂ ಬಳಸಿದರು. ತನ್ನನ್ನು ಶ್ರೇಷ್ಠವೆಂದು ಕರೆದುಕೊಳ್ಳುವ ವಸಾಹತುಶಾಹಿಯು ತನ್ನ ವಸಾಹತು ದೇಶಗಳ ನಾಗರಿಕತೆ –ಸಂಸ್ಕೃತಿಗಳನ್ನು ಕೀಳೀಕರಿಸಿ ನೋಡುವ ನೋಟ ಕ್ರಮಕ್ಕೆ ಸಂಬಂಧಿಸಿದ್ದು, ಇದನ್ನು ಡಿ.ಆರ್.ನಾಗರಾಜರು "ವಸಾಹತುಶಾಹಿ ಅನ್ನುವುದು ಮುಖ್ಯವಾಗಿ ಸಂಸ್ಕೃತಿಯೊಂದರಲ್ಲಿ ಲಭ್ಯವಿರುವ ಬಹು ಆಯ್ಕೆಗಳ ನಿರ್ನಾಮ"[೪] ಎಂದು ನಿರ್ವಚಿಸುತ್ತಾರೆ. ಅಂದರೆ ವಸಾಹತುಶಾಹಿಯು ಬಹುರೂಪಿ ಸಾಂಸ್ಕೃತಿಕ ರಚನೆಗಳನ್ನು ನಿರ್ನಾಮಗೊಳಿಸಿ ಏಕರಾಷ್ಟ್ರ, ಏಕಧರ್ಮ ಹಾಗೂ ಏಕಸಂಸ್ಕೃತಿಗಳೆಂಬ ಸರಳ ರೇಖಾತ್ಮಕ ವ್ಯವಸ್ಥೆಗಳ ನಿರ್ಮಾಣದಲ್ಲಿ ತೊಡಗಿತು. ಇಂತಹ ಪ್ರಕ್ರಿಯೆಯಲ್ಲಿ ನಿರ್ಮಾಣಕ್ಕಾಗಿ ಅಲ್ಲಿನ ಮೇಲ್ಜಾತಿ–ಮೇಲ್ವರ್ಗಗಳನ್ನು ಬಳಸಿಕೊಂಡಿತು. ಭಾರತೀಯ ಸಂದರ್ಭದಲ್ಲಿ ಅದು "ಒಂದು ಮಿಥ್ಯಾ ದ್ವಿಮುಖ ವಿರೋಧವನ್ನು ನಿರ್ಮಿಸಿತ್ತು. ಇದು ಯಾವುದೆಂದರೆ, ಸಾಂಸ್ಕೃತಿಕವಾಗಿ 'ಶ್ರೀಮಂತ'ವಾಗಿವೆ ಎಂದು ಹೇಳಲಾಗುವ ಮೇಲ್ಜಾತಿಗಳಿಗೂ ಹಾಗೂ ಸಾಂಸ್ಕೃತಿಕ 'ಬಡತನ' ಹೊಂದಿವೆ ಎಂದು ಹೇಳಲಾಗುವ ಕೆಳಜಾತಿಗಳಿಗೂ ಇದೆ ಎನ್ನಲಾಗುವ ವಿರೋಧ[೫]". ವಸಾಹತುಶಾಹಿಯು ಇಲ್ಲಿ ಮೊದಲೇ ಇದ್ದ ಜಾತಿಯಾಧಾರಿತ ಏಣಿಶ್ರೇಣಿ ವ್ಯವಸ್ಥೆಯನ್ನು ಬಂಡವಾಳ ವಾಗಿಸಿಕೊಂಡಿತು. ಭಾರತೀಯ ಸಮಾಜದೊಳಗೆ ಅಂತರ್ಗತವಾಗಿದ್ದ 'ಬ್ರಾಹ್ಮಣ' ಮತ್ತು 'ಶ್ರಮಣ' ಧಾರೆಗಳಲ್ಲಿ ವೈದಿಕಶಾಹಿಗೆ ಪುಷ್ಟಿಯನ್ನು ನೀಡಿತು. ಶ್ರಮಣಧಾರೆಗಳನ್ನು ಕೀಳೆಂದು ಅರ್ಥೈಯಿಸಿತು.

ಭಾರತದಲ್ಲಿ ವಸಾಹತು ನೆಲೆಗಳನ್ನು ಸ್ಥಾಪಿಸಲು ಡಚ್, ಪೋರ್ಚುಗೀಸ್, ಪ್ರೆಂಚ್ ಹಾಗೂ ಇಂಗ್ಲೀಷರ ಮಧ್ಯೆ ಸ್ಪರ್ಧೆಯೇ ಏರ್ಪಟಟಿತ್ತು. ಈ ಸ್ಪರ್ಧೆಯಲ್ಲಿ ಅಂತಿಮವಾಗಿ ಗೆಲುವು ಸಾಧಿಸಿದದು ಇಂಗ್ಲೆಂಡಿನ 'ಈಸ್ಟ್ ಇಂಡಿಯಾ ಕಂಪನಿ'; ಕೇವಲ ವ್ಯಾಪಾರಕ್ಕೆಂದು ಬಂದ ವಸಾಹತುಶಾಹಿಗಳು ಕ್ರಮೇಣವಾಗಿ ಭಾರತದ ರಾಜಕೀಯ ಲೋಕದೊಳಗೆ ಹಸ್ತಕ್ಷೇಪ ಮಾಡಿ ಇಲ್ಲಿನ ಸಾಮಾಜಿಕ ರಚನೆಯನ್ನೇ ಬದಲಾಯಿಸಿದವು. ಇಲ್ಲಿಂದಲೇ ವಸಾಹತುಶಾಹಿಗಳು ಒಂದು ದೊಡ್ಡ ಸಾಮ್ರಾಜ್ಯಶಾಹಿ ಶಕ್ತಿಯಾಗಿ ರೂಪುಗೊಂಡರು. ನಂತರದಲ್ಲಿ ತಮ್ಮ ವಂಶವಾಹಿ ಆಳ್ವಿಕೆಗೆ ಒಂದು ಭದ್ರ ಬುನಾದಿಯನ್ನು ತಮ್ಮ ವ್ಯಾಪಾರಿ ತಂತ್ರದ ಮೂಲಕವೇ ರೂಪಿಸಿದರು. ಭಾರತದಲ್ಲಿ ವ್ಯಾಪಾರಿ ಉದ್ದೇಶಕ್ಕಾಗಿ ಬಂದ ವಸಾಹತುಶಾಹಿಗಳು ಕೇವಲ ವ್ಯಾಪಾರಿ ಏಜನ್ಸಿಗಳಾಗಿ ಉಳಿಯದೆ ಸಾಮ್ರಾಜ್ಯಶಾಹಿಗಳಾಗಿ ಮೆರೆದಿದ್ದು, ಇಲ್ಲಿನ ಜನತೆಯ ಸಾಮಾಜಿಕ ದೌರ್ಬಲ್ಯದ ಅಡಿಪಾಯದ ಮೇಲೆಯೇ. ಈ ದೌರ್ಬಲಯವನ್ನೇ

ಬಂಡವಾಳವನ್ನಾಗಿಸಿಕೊಂಡ ವಸಾಹತುಶಾಹಿಗಳು ಉಪಕಾರ ಮತ್ತು ಕಲ್ಯಾಣ ಪರಿಕಲ್ಪನೆಗಳ ತಂತ್ರಗಾರಿಕೆಯನ್ನು ಅನುಸರಿಸಿ ಭಾರತವನ್ನು ಆಳಿದರು.

ಭಾರತದ ರಾಜಪ್ರಭುತ್ವದೊಳಗೆ ನಡೆಯುತ್ತಿದ್ದ ಆಂತರಿಕ ಕಲಹಗಳ ಲಾಭ ಪಡೆದು ವಸಾಹತುಶಾಹಿ ತನ್ನ ಅಸ್ತಿತ್ವವನ್ನು ಸ್ಥಿರಗೊಳಿಸಿಕೊಂಡಿತು. ಈ ಹೊತ್ತಿಗೆ ಮೊಘಲ್ ಸಾಮ್ರಾಜ್ಯ ತನ್ನ ಅಂತ್ಯವನ್ನು ಕಾಣುವ ಸ್ಥಿತಿಯಲ್ಲಿತ್ತು. ಹಾಗೆಯೇ ಭಾರತದ ಜನತೆಗೆ ಮೊಘಲರ ಆಳ್ವಿಕೆಯ ಮೇಲಿದ್ದ ಸುಪ್ತವಾದ ಅಸೂಯೆಯ ಭಾವನೆಯನ್ನು ವಸಾಹತುಶಾಹಿಗಳು ಬಂಡವಾಳವನ್ನಾಗಿಸಿಕೊಂಡರು. ಇಲ್ಲಿನ ರಾಜಪ್ರಭುತ್ವಗಳೊಳಗಿನ ಆಂತರಿಕ ಕಲಹಗಳಂತೆಯೇ ಈ ಸಾಮಾಜಿಕ ರಚನೆಯೊಳಗಿದ್ದ ಊಳಿಗಮಾನ್ಯ ವಯವಸ್ಥೆಯೂ ವಸಾಹತುಶಾಹಿಗಳಿಗೆ ಪೂರಕವಾಯಿತು. ಅದು ಇಲ್ಲಿದ್ದ ಊಳಿಗಮಾನ್ಯ ವ್ಯವಸ್ಥೆಯನ್ನು ಬದಲಿಸಿ ಹೊಸ ಆರ್ಥಿಕ ನೀತಿಗೆ ಭಾರತೀಯ ಸಮಾಜವನ್ನು ಒಗ್ಗಿಸುವ ಕೆಲಸ ಮಾಡಿತು. ಈ ಹೊಸ ಆರ್ಥಿಕ ನೀತಿಯಿಂದ ರೂಪುಗೊಂಡ ವ್ಯವಸ್ಥೆ ಭಾರತದ ಊಳಿಗಮಾನ್ಯ ವ್ಯವಸ್ಥೆಯಲ್ಲಿ ನಲುಗುತ್ತಿದ್ದ ಕೆಳವರ್ಗಗಳಿಗೆ ಆಶಾದಾಯಕವಾಗಿ ಕಂಡಿತು. ಹಾಗೂ ವಸಾಹತುಶಾಹಿ ರೂಪಿಸಿದ ಹೊಸ ವ್ಯವಸ್ಥೆಯನ್ನೇ ಅನಿವಾರ್ಯವೆಂಬಂತೆ ಅದು ರೂಪಿಸಿತು. ಹೀಗೆ ವಸಾಹತುಶಾಹಿ ಭಾರತೀಯ ಸಾಮಾಜಿಕ ವ್ಯವಸ್ಥೆಯನ್ನು ವ್ಯಾಪಿಸಿತು.

## ರಾಷ್ಟ್ರೀಯತೆಯ ಪ್ರಜ್ಞೆ ಮತ್ತು ವಸಾಹತುಶಾಹಿ ವಿರೋಧಿ ನೆಲೆಗಳು

ವಸಾಹತುಶಾಹಿಯು ಭಾರತದಲ್ಲಿ ಹುಟ್ಟು ಹಾಕಿದ ಏಕರೂಪಿ ನಿರೂಪಣೆಯ ಫಲವಾಗಿ ಧಾರ್ಮಿಕವಾಗಿ 'ಹಿಂದೂ' ಪರಂಪರೆ ರೂಪುಗೊಂಡು ಅದೇ ಭಾರತೀಯ ರಾಷ್ಟ್ರೀಯತೆಯ ಪ್ರಜ್ಞೆಯಾಗಿ ಸ್ಥಿತ್ಯಂತರವಾಯಿತು. ವಸಾಹತುಶಾಹಿಯು ರೂಪಿಸಿದ ಏಕರೂಪೀಕರಣದ ಫಲವಾಗಿ ರೂಪುಗೊಂಡ ಹಿಂದೂ ಧರ್ಮ ಹಾಗೂ ಭಾರತೀಯ ರಾಷ್ಟ್ರೀಯತೆಗಳೇ ಮುಂದೆ ವಸಾಹತುಶಾಹಿಯ ಪ್ರತಿರೋಧದ ರೂಪಗಳಾಗಿ ಪರಿವರ್ತನೆಯಾದವು. ಈ ಹೊಸ ರೂಪಗಳೇ ಇಂದಿಗೂ ಭಾರತೀಯರನ್ನು ಒಗ್ಗೂಡಿಸಿರುವ ಅಂಶಗಳು. ಅದೇ ರೀತಿ ಈ ತತ್ವಗಳೇ ಭಾರತವನ್ನು ಹಿಂದೂ–ಮುಸ್ಲಿಂ ಎಂದು ವಿಭಾಗಿಸಿ ವ್ಯಾಪಕ ಹಿಂಸಾಚಾರಗಳನ್ನು ಸೃಷ್ಟಿಸಿದವು. ಮತ್ತು ಇಂದಿಗೂ ಜನಾಂಗೀಯ ತಾರತಮ್ಯಗಳನ್ನು ಬಿತ್ತುವ ಅಸ್ತ್ರಗಳಾಗಿ

ಬಳಕೆಯಾಗುತ್ತಿವೆ. ಇವು ಮತಾಂತರ ಚರ್ಚೆಯನ್ನು ತೀವ್ರಗೊಳಿಸುತ್ತಿರುವ ಅಂಶಗಳಾಗಿ ಬಳಕೆಯಾಗುತ್ತಿವೆ.

ವಿದೇಶಿಯರ ವಸಾಹತು ನೀತಿ ಮತ್ತು ಸಾಮ್ರಾಜ್ಯಶಾಹಿತ್ವವನ್ನು ಕಿತ್ತೊಗೆದು ಸ್ವಾತಂತ್ರ್ಯ ಪಡೆಯುವಲ್ಲಿ ಮಹತ್ವದ ಪಾತ್ರ ವಹಿಸಿದವು ರಾಷ್ಟ್ರೀಯ ಚಳುವಳಿಗಳು. ಇವು ಒಂದು ರಾಷ್ಟ್ರವನ್ನು ನೆಲದ ನೆಪದಲ್ಲಿ ಭಾವನಾತ್ಮಕವಾಗಿ ಒಂದುಗೂಡಿಸುವ ಪ್ರಯತ್ನ ಮಾಡುತ್ತವೆ. ಇದು ಸಮಾಜದ ಸ್ಥಿತಿ ರಾಜ ಪ್ರಭುತ್ವದಿಂದ ರಾಷ್ಟ್ರಪ್ರಭುತ್ವಕ್ಕೆ ಬದಲಾಗುವಾಗ ಉಂಟಾಗುವ ಪರಿಕಲ್ಪನೆ. ಯೂರೋಪಿನಲ್ಲಿ ಹತ್ತೊಂಬತ್ತನೇ ಶತಮಾನದಲ್ಲಿ ರೂಪುಗೊಂಡ ಈ ಪರಿಕಲ್ಪನೆಗೆ ಮುಖ್ಯವಾದ ಅನನ್ಯತೆ ಏರ್ಪಟ್ಟಿದ್ದೇ ಅಸ್ತಿತ್ವದ ಬೇರುಗಳನ್ನು ಹುಡುಕುವ ಪ್ರಯತ್ನದಲ್ಲಿ. ಇದೇ ಕಾರಣವು ಭಾರತದಲ್ಲಿಯೂ ಸಂಭವಿಸಿತು. ರಾಷ್ಟ್ರೀಯತೆಯ ಚಳುವಳಿಗಳು ಹಾಗೂ ವಸಾಹತುಶಾಹಿ ವಿರೋಧಿ ಚಳುವಳಿಗಳೂ ಒಟ್ಟೊಟ್ಟಿಗೆ ಕ್ರಿಯಾಶೀಲವಾದವು. ವಸಾಹತುಶಾಹಿ ವಿರೋಧವಾಗಿ ಹುಟ್ಟಿದ ಈ ರಾಷ್ಟ್ರೀಯತೆಯೂ ಕೂಡ ಭಾರತೀಯ ಪರಂಪರೆಯು ರೂಪುಗೊಂಡ ಏಕರೂಪೀ ಸ್ಥಿತಿಯಿಂದ. ಹತ್ತೊಂಬತ್ತು ಹಾಗೂ ಇಪ್ಪತ್ತನೇ ಶತಮಾನಗಳಲ್ಲಿ ಹೊಸದಾಗಿ ರೂಪುಗೊಂಡ "ಈ ರಾಷ್ಟ್ರೀಯತೆ ಎನ್ನುವುದು ತಿಲಕ್‌ವಾದಿ, ಗಾಂಧಿವಾದಿ ಮತ್ತು ಸಮಾಜವಾದೀ ನೆಲೆಗಳಲ್ಲಿಯೂ ತನ್ನ ಅತ್ಯುತ್ಕಟ ಅಭಿವ್ಯಕ್ತಿಗಳನ್ನು ಸಾಧಿಸಿದ್ದರೂ, ಇದುವರೆಗಿನ ಸಾಂಪ್ರದಾಯಿಕ ಭಾರತೀಯತೆ ಎನ್ನುವುದೇ ರಾಷ್ಟ್ರೀಯತೆಯ ಸ್ಥಾಯೀ ಲಕ್ಷಣವಾಗಿ ಉಳಿದುಕೊಂಡು ಬಂದಿರುವುದನ್ನು ಶತಮಾನಕ್ಕೂ ಹೆಚ್ಚಿನ ಅವಧಿಯ ಇದರ ಚರಿತ್ರೆಯಲ್ಲಿ ನಾವು ಗಮನಿಸಬಹುದಾಗಿದೆ"[೬].

ಭಾರತಕ್ಕೆ ಆಧುನಿಕ ಪರಿಕಲ್ಪನೆಯಾಗಿ ರೂಪುಗೊಂಡ ರಾಷ್ಟ್ರೀಯತೆ ಮತ ಪ್ರಚಾರ ಹಾಗೂ ಮತಾಂತರದ ಚರ್ಚೆಗಳಲ್ಲಿ ಮಹತ್ವದ ಪಾತ್ರ ವಹಿಸುತ್ತಾ ಬಂದಿದೆ. ಮೂಲಭೂತವಾಗಿ ಧಾರ್ಮಿಕ ಚೌಕಟ್ಟಿನೊಳಗೆ ರೂಪುಗೊಂಡದ್ದಾದ್ದರಿಂದ ಭಾರತವನ್ನು ಜನಾಂಗಿಕವಾಗಿ ವಿಭಜಿಸುತ್ತಾ ಬಂದಿದೆ. ಇಂದು ಮತಾಂತರದ ವಿರುದ್ಧವಾಗಿ ಮಾತನಾಡುವ ಚಿಂತಕರ ಆತಂಕವೇ ಈ ಸಾಂಪ್ರದಾಯಿಕ ರಾಷ್ಟ್ರೀಯತೆ ಅಸ್ಥಿರಗೊಳ್ಳುತ್ತಿದೆ ಎಂಬ ಕಲ್ಪನೆಯದು. ಈ ಸಾಂಪ್ರದಾಯಿಕ ರಾಷ್ಟ್ರೀಯತೆಯ ತತ್ವ ಕನ್ನಡ ನವೋದಯ ಸಾಹಿತ್ಯದಲ್ಲಿ ಅಭಿವ್ಯಕ್ತವಾಗುವ ಬಗೆಯು ವಿಶಿಷ್ಟವಾದದ್ದು. ಅದು ವಸಾಹತುಶಾಹಿಗೆ ತನ್ನ ಪ್ರತಿರೋಧದ ಕಥನಗಳನ್ನು ಕಟ್ಟುವಾಗ ಶುದ್ಧ ಧಾರ್ಮಿಕ

ನೆಲೆಯಲ್ಲಿ ಮಾತನಾಡದೆ ಪರಂಪರೆಯೊಳಗಿನ ಮೌಢ್ಯಗಳ ನಾಶದ ನವ ರಾಷ್ಟ್ರೀಯತೆಯ ಬಗೆಗೆ ಚಿಂತಿಸುತ್ತದೆ. ಅದು ಮಾತನಾಡುವ ರಾಷ್ಟ್ರೀಯತೆ ಗಾಂಧಿ ಮಾದರಿಯದು. ಇಲ್ಲಿನ ಮೌಢ್ಯಗಳು, ಅಸಮಾನತೆಗಳೆಲ್ಲ ನಾಶವಾಗಿ ಒಂದು ಶುದ್ಧರೂಪದ ಹಿಂದೂ ಪರಂಪರೆಯನ್ನು ಅದು ಕಲ್ಪಿಸಿಕೊಳ್ಳುತ್ತದೆ. ಕುವೆಂಪು ತಮ್ಮ ಕಾದಂಬರಿಗಳಲ್ಲಿ ವ್ಯಕ್ತಪಡಿಸುವ ಬಹುದೊಡ್ಡ ಆಶಯ ನವರಾಷ್ಟ್ರೀಯತೆಯದ್ದು. ವಸಾಹತುಶಾಹಿ ಏಣಿಶ್ರೇಣೀಕರಣವನ್ನು ತನ್ನ ಗರ್ಭದಲ್ಲಿರಿಸಿಕೊಂಡಿದ್ದ ವೈದಿಕ ಪರಂಪರೆಯನ್ನು ಪುಷ್ಟಿಕರಿಸುವಂತೆ ನವೋದಯ ಕಾದಂಬರಿಗಳು ವರ್ತಿಸುವುದಿಲ್ಲ. ರಾಷ್ಟ್ರೀಯತೆಯೆಂಬುದು ಪಾಶ್ಚಾತ್ಯ ನಾಗರೀಕತೆಯ ಸಂಪರ್ಕ ಹಾಗೂ ವಸಾಹತುಶಾಹಿಯ ಪ್ರಭಾವದಿಂದ ರೂಪುಗೊಂಡ ಆಧುನಿಕ ವ್ಯವಸ್ಥೆಯಾದರೂ ಇದರ ಜೊತೆಗೆ ನವೋದಯ ಸಾಹಿತ್ಯ ಅನುಸಂಧಾನ ನಡೆಸಿ ಅದಕ್ಕೆ ಭಿನ್ನವಾದ ನವ ರಾಷ್ಟ್ರೀಯತೆಯನ್ನು ಎತ್ತಿ ಹಿಡಿಯುತ್ತದೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಕುವೆಂಪು ಪಾದ್ರಿ ಜೀವರತ್ನಯ್ಯನ ಮತಪ್ರಚಾರಕ ತಂತ್ರವನ್ನು ವಿರೋಧಿಸುತ್ತಾ ವಿವೇಕಾನಂದರ ಚಿಕಾಗೋ ಭಾಷಣದ ತಿರುಳನ್ನು ಉದ್ಧರಿಸುವುದರೊಳಗಿನ ಅಂತಹಃ ಸತ್ಯವೇ ಈ ನವ ರಾಷ್ಟ್ರೀಯತೆಯನ್ನು ಕುರಿತಾದದ್ದು.

## ಸುಧಾರಣಾವಾದಿ ಚಿಂತನೆಯ ಪ್ರಭಾವಗಳು

ಆಧುನಿಕ ಶಿಕ್ಷಣ ಪದ್ಧತಿಯು ಭಾರತೀಯ ಸಮಾಜಕ್ಕೆ ಹೊಸ ಪ್ರಜ್ಞೆಯೊಂದನ್ನು ರವಾನಿಸಿತು. ಈ ಪ್ರಜ್ಞೆಯು ತನ್ನ ಪರಂಪರೆಯೊಳಗೆ ಅಥವಾ ಸಮಾಜದೊಳಗೆ ಅಂತರ್ಗತವಾಗಿದ್ದ ಮೌಢ್ಯಗಳನ್ನು ನಿರಾಕರಿಸಿ ಹೊಸ ಸಾಮಾಜಿಕ ರಚನೆಯೊಂದನ್ನು ಸ್ಥಾಪಿಸುವ ಪ್ರಜ್ಞೆಯಾಗಿ ರೂಪುಗೊಂಡಿತು. ಈ ಪ್ರಜ್ಞೆಯ ಭಾಗವಾಗಿ ರೂಪುಗೊಂಡ ಸುಧಾರಣಾವಾದಿಗಳು ಬ್ರಿಟೀಷರ ರಾಜಕಾರಣದ ಬಗ್ಗೆ ಹೆಚ್ಚು ತಲೆಕೆಡಿಸಿಕೊಂಡವರಲ್ಲ. ಇವರು ಬ್ರಿಟೀಷರ ಜೊತೆ ಬಂದ ಶಿಕ್ಷಣ, ವೈಚಾರಿಕತೆಗಳ ಸ್ವಾಗತಕಾರರು. ವಸಾಹತುಶಾಹಿಯಿಂದ ಬಂದ ಇಂಗ್ಲೀಷ್ ವಿದ್ಯಾಭ್ಯಾಸವನ್ನು ಕಲಿತ ಇವರು ಭಾರತೀಯ ಸಮಾಜದೊಳ ಮೌಢ್ಯ ಕ್ರೌರ್ಯಗಳನ್ನು ನಿರ್ನಾಮ ಮಾಡುವ ಕೆಲಸಗಳನ್ನು ಕಾನೂನಾತ್ಮಕವಾಗಿ ರೂಪಿಸುವ ಯತ್ನ ಮಾಡಿದರು. ಈ ಪ್ರಜ್ಞೆಯು ನವೋದಯ ಬರಹಗಾರರೊಳಗೂ

ಕಂಡುಬರುವುದನ್ನು ಕಾಣಬಹುದಾಗಿದೆ. ಈ ವೈಚಾರಿಕತೆ ರೂಪುಗೊಂಡಿದ್ದು ರಾಷ್ಟ್ರೀಯತೆಯ ಪ್ರಜ್ಞೆಯೊಳಗೇ. ರಾಜಾರಾಮ್ ಮೋಹನ್ ರಾಯ್, ದಯಾನಂದ ಸರಸ್ವತಿ ಮುಂತಾದ ಸುಧಾರಣಾವಾದಿಗಳು ಕಟ್ಟಿದ ಬ್ರಹ್ಮಸಮಾಜ, ಆರ್ಯ ಸಮಾಜಗಳೆಂಬ ಕಲ್ಪನೆಗಳು ಸಂಪ್ರದಾಯಗಳನ್ನು ವಿರೋಧಿಸಿ ಭಾರತೀಯ ಧಾರ್ಮಿಕ ಪರಂಪರೆಯ ನೆಲೆಯೊಳಗೆ ರೂಪುಗೊಂಡ ಸ್ವರೂಪದವು. ಈ ಸುಧಾರಣಾವಾದಿ ಚಳುವಳಿಗಳು ಸಮಾಜದಲ್ಲಿದ್ದ ಸತಿಪದ್ಧತಿ, ವಿಧವಾ ವಿವಾಹಗಳಂತಹ ಸಮಸ್ಯೆಗಳಿಗೆ ಪರಿಹಾರಗಳನ್ನು ಹುಡುಕುವ ಪ್ರಯತ್ನ ಮಾಡಿದವು. ಆದರೆ ಇಲ್ಲೊಂದು ಸಮಸ್ಯೆಯೂ ಸೃಷ್ಟಿಯಾಗುತ್ತದೆ. ಅದೇನೆಂದರೆ ವೈದಿಕ ಪರಂಪರೆಯೊಳಗಿನ ಸಾಂಪ್ರದಾಯಿಕ ಮೌಢ್ಯಗಳ ವಿರುದ್ಧ ಮಾತನಾಡಿದವೇ ಹೊರತು ಭಾರತೀಯ ಸಮಾಜದ ಜಾತಿಪದ್ಧತಿಯನ್ನು ಹೋಗಲಾಡಿಸುವ ಪ್ರಯತ್ನಗಳು ಈ ಚಳುವಳಿಗಳಿಂದ ಅಷ್ಟಾಗಿ ಆಗಲಿಲ್ಲ. ಜ್ಯೋತಿಬಾಪುಲೆಯವರು ತಮ್ಮ 'ಸತ್ಯಶೋಧಕ ಸಮಾಜ'ದ ಮೂಲಕ ಜಾತಿಪದ್ಧತಿಯ ವಿರುದ್ಧ ಕೆಲಸ ಮಾಡಿದರಾದರೂ ಈ ಪ್ರಯತ್ನಗಳು ಅನುಷಂಗಿಕವಾದುವು.

ಸುಧಾರಣಾವಾದಿಗಳು ಸಾಮಾಜಿಕ ಮೌಢ್ಯಗಳು ಹಾಗೂ ಅಸಮಾನತೆಗಳನ್ನು ಪರಿಹರಿಸಲು ತೊಡಗಿದ ಅನಂತರ ಕಂಡ ಪರ್ಯಾಯಗಳು ಹಿಂದೂ ಧರ್ಮದ ಚೌಕಟ್ಟಿನಲ್ಲಿಯೇ ಇದ್ದವು. ಈ ಚಿಂತನೆಯ ಮೂಲವಿರುವುದು 'ನವ ನಾಗರಿಕತೆ'ಯ ಕಲ್ಪನೆಯಲ್ಲಿ. ಮನುಷ್ಯ ಸ್ವಚ್ಛಂದವಾದ ಬದುಕೊಂದನ್ನು ನಿರ್ಮಿಸಿಕೊಳ್ಳುವಲ್ಲಿನ ಎಡರು-ತೊಡರುಗಳನ್ನು ನಿವಾರಿಸಿಕೊಳ್ಳುವ ರೀತಿಯಲ್ಲಿ ಈ ಚಳುವಳಿಗಳು ಬೆಳೆದವು. ಈ ಚಳುವಳಿ ಉದಾರ ಮಾನವತಾವಾದವನ್ನು ಸಮಾಜದೊಳಗೆ ಬಿತ್ತುವ ಕೆಲಸ ಮಾಡಿದವು. ಈ ಎಲ್ಲ ಚಿಂತನೆಗಳಲ್ಲಿ ಯುರೋಪಿಯನ್ ತಾತ್ವಿಕತೆಯ ಪ್ರಭಾವವನ್ನು ನಾವು ಕಾಣಬಹುದಾಗಿದೆ.

ಆಧುನಿಕ ನಾಗರಿಕತೆಯ ಪ್ರಭಾವದಿಂದ ರೂಪುಗೊಂಡ ಸುಧಾರಣಾವಾದಿ ಚಳುವಳಿಗಳು ಕಲ್ಪಿಸಿದ ನವನಾಗರಿಕತೆಯ ತತ್ವ ನವೋದಯ ಕಾದಂಬರಿಗಳಲ್ಲಿ ದಟ್ಟವಾಗಿ ವ್ಯಾಪಿಸಿರುವುದನ್ನು ಕಾಣುತ್ತೇವೆ. ವಸಾಹತುಶಾಹಿಯ ವಿರೋಧವಾಗಿ ಹುಟ್ಟಿಕೊಂಡ ರಾಷ್ಟ್ರೀಯತೆ ಹಾಗೂ ಸಾಮಾಜಿಕ ಮೌಢ್ಯಗಳ ಸುಧಾರಣಾ ಚಳುವಳಿಗಳು ನವೋದಯ ಸಾಹಿತ್ಯವನ್ನು ಪ್ರಭಾವಿಸಿರುವುದನ್ನು ಕಾಣಬಹುದು.

"ರಾಷ್ಟ್ರೀಯತೆಯ ಪರಿಕಲ್ಪನೆ ಕುಡಿಯೊಡೆದಿದ್ದರ ಬೆನ್ನಿಗೇನೇ ನವೋದಯದ ಆರಂಭವೂ ಆಗಿದೆ. ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ಬ್ರಿಟೀಷರು ನೀಡಿದ ಶಿಕ್ಷಣ ಪದ್ಧತಿ ಪೋಷಿಸಿರಬಹುದಾದಂತೆಯೇ ಭಾರತೀಯ ಸಾಹಿತ್ಯದ ನವೋದಯದ ಹುಟ್ಟಿಗೂ ಈ ಶಿಕ್ಷಣ ಪದ್ಧತಿಯೇ ಪ್ರೇರಕ ಅಂಶವಾಗಿ ಪರಿಣಮಿಸಿರಬಹುದಾಗಿದೆ. ಬ್ರಿಟೀಷರ ಮೂಲಕ ಇಂಗ್ಲೀಷ್ ಶಿಕ್ಷಣ ದೊರೆಯದೇ ಹೋಗದಿದ್ದರೆ ಭಾರತೀಯ ಭಾಷಾ ಸಾಹಿತ್ಯದಲ್ಲಿ ಯಾವುದರ ನವೋದಯವಾಗುತ್ತಿತ್ತೋ ಹೇಳಬರುವುದಿಲ್ಲ-ವಾದರೂ ಈಗಿನ 'ರಮ್ಯಪಂಥ'ವಂತೂ ಮೈದಾಳುತ್ತಿರಲಿಲ್ಲವೆನಿಸುತ್ತದೆ. ಈ ನೆಲೆಯಿಂದ ಪರಿಶೀಲಿಸಿದಾಗ ನವೋದಯ ಸಾಹಿತ್ಯ ಮತ್ತು ರಾಷ್ಟ್ರೀಯತೆಯ ನಡುವೆ ತುಂಬಾ ಆಳವಾದ ಸಂಬಂಧಗಳೇ ಇವೆಯೆನ್ನಬಹುದು"[೭]. ಈ ಸಂಬಂಧವಾಗಿಯೇ ನವೋದಯ ಸಾಹಿತ್ಯವು ಉದಾರ ಮಾನವೀಯತೆಯನ್ನು ಒಳಗೊಂಡ ಉದಾತ್ತ ರಾಷ್ಟ್ರೀಯತೆಯನ್ನು ಪ್ರಕಟಪಡಿಸಿತು. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ರೂಪುಗೊಂಡ ರಾಷ್ಟ್ರೀಯತೆಯ ಸೀಮಿತತೆಯನ್ನು ಡಾ.ಡಿ.ಆರ್.ನಾಗರಾಜ್, "ಸ್ವಾತಂತ್ರ ಹೋರಾಟಗಳಲ್ಲಿಯ Militant ರಾಷ್ಟ್ರೀಯತೆ ಲೇಖಕನ ಪ್ರಜ್ಞೆಯ ಮೇಲೆ ಪರಸ್ಪರ ವಿರುದ್ಧವಾದ ಎರಡು ರೀತಿಯ ಪ್ರಭಾವಗಳನ್ನು ಬೀರುತ್ತದೆ. ಒಂದು ಕಡೆಗೆ, ಲೇಖಕನ ಪ್ರಜ್ಞೆಯನ್ನು ಹೆಚ್ಚು ಆಧುನಿಕವಾದ ರೀತಿಯಲ್ಲಿ, ಮೂರ್ತ ರೀತಿಯಲ್ಲಿ ವಿಕಾಸಶೀಲವಾಗಿಸುತ್ತದೆ. ಹೊರ ಶತ್ರುವಿನ ವಿರುದ್ಧ ಹೋರಾಟಕ್ಕೆ ಅಗತ್ಯವಾದ ನಾಡಿನ ಬೌದ್ಧಿಕ ಒಗ್ಗಟ್ಟಿಗೆ ಅಡ್ಡಿ ಇರುವ ಎಲ್ಲ ಸಂಗತಿಗಳ ವಿರುದ್ಧ ಲೇಖಕ ದೊಡ್ಡ ಯುದ್ಧ ಹೂಡುತ್ತಾನೆ. ಸಾಂಪ್ರದಾಯಿಕ ಸಾಮಾಜಿಕ ಶ್ರೇಣೀಕರಣಗಳ ನಡುವೆ ಅಂತರ ಅಪಾರವಾಗಿದ್ದಲ್ಲಿ, ಮಾನವ-ಮಾನವರ ನಡುವಿನ ಸಾಂಸ್ಥಿಕ ಬಿರುಕುಗಳು ಅನಾರೋಗ್ಯಕರವಾದ ಸಾಂಸ್ಕೃತಿಕ ಸ್ವರೂಪವನ್ನು ಪಡೆದಿದ್ದರೆ, ಅದರ ವಿರುದ್ಧ ಸ್ವಾತಂತ್ರ್ಯ ಚಳುವಳಿ ಸೈದ್ಧಾಂತಿಕ ಸಮರ ನಡೆಸುತ್ತದೆ. ಭಾರತದ ರಾಷ್ಟ್ರೀಯತಾ ಆಂದೋಲನ ಜಾತಿಪದ್ಧತಿಯ ವಿರುದ್ಧ ನಡೆಸಿದ ಹೋರಾಟವನ್ನು ಅರ್ಥೈಸಬೇಕಾದದ್ದು ಈ ಹಿನ್ನೆಲೆಯಲ್ಲಿಯೇ. ಸಂಕುಚಿತ ಮೌಲ್ಯಗಳಿಂದ ಬಿಡುಗಡೆ ಹೊಂದಿ ಹೆಚ್ಚು ವಿಶಾಲವಾದ ಮೌಲ್ಯಗಳನ್ನು ಹೊಂದಲು ಲೇಖಕನನ್ನು ರಾಷ್ಟ್ರೀಯತಾ ಆಂದೋಲನದ ಸಿದ್ಧಾಂತಗಳು ಪ್ರೇರೇಪಿಸುತ್ತವೆ. ಇದು ಪ್ರಭಾವದ ಒಂದು ಮುಖ.

ಹೊರ ಶತ್ರುವಿನ ವಿರುದ್ಧ ದೇಶದ ಎಲ್ಲ ಜನರನ್ನು ಒಗ್ಗಟ್ಟಾಗಿಸುವುದು ರಾಷ್ಟ್ರೀಯ ಹೋರಾಟದ ಮುಖ್ಯ ನೆಲೆ. ನಾಡಿನ ಆಂತರಿಕ ಶ್ರೇಣೀಕರಣಗಳ ಪರಸ್ಪರ

ಹೋರಾಟ, ಸಂಘರ್ಷ ತೀವ್ರವಾದಲ್ಲಿ ನಾಡೇ ಒಡೆದು ಹೋಬಹುದಲ್ಲ. ಆದ್ದರಿಂದಲೇ ರಾಷ್ಟ್ರೀಯತೆಯ ಸಿದ್ಧಾಂತಗಳು ಲೇಖಕನನ್ನು ವರ್ಗ ಸಂಘರ್ಷದ ಚಾರಿತ್ರಿಕ ವಾಸ್ತವತೆಯನ್ನು ಸಮಗ್ರವಾಗಿ ಗ್ರಹಿಸದಂತೆ ತಡೆಯುತ್ತವೆ. ಇದು ಲೇಖಕನ ಪ್ರಜ್ಞೆಯನ್ನು ಕುಗ್ಗಿಸುತ್ತದೆ. ರಾಷ್ಟ್ರೀಯತೆಯ ಪ್ರಭಾವದ ಇನ್ನೊಂದು ಪರಿಣಾಮ ಇದು"ಲ. ಎಂದು ಹೇಳುತ್ತಾರೆ. ಈ ಮಾತುಗಳು ಮಾರ್ಕ್ಸ್‌ವಾದಿ ನೆಲೆಯವಾದರೂ ರಾಷ್ಟ್ರೀಯೆಯ ಶಕ್ತಿ ಮತ್ತು ಮಿತಿಗಳೆರಡನ್ನು ಸಮರ್ಥವಾಗಿ ವಿವರಿಸುತ್ತದೆ.

"ಆಧುನಿಕ ಪರಿಕಲ್ಪನೆಯಾದ ಈ ರಾಷ್ಟ್ರೀಯತೆಯನ್ನು ಬಲಪಡಿಸಲು ತೊಡಗುವ ಲೇಖಕ ತನ್ನ ನಾಡಿನ ಆಂತರಿಕ ಸಂಘರ್ಷಪೂರಿತ ಪರಿಸರವನ್ನು ಸೂಕ್ಷ್ಮವಾಗಿ ಗ್ರಹಿಸಲಾರದೆ ಹೋಗುವ ಅಪಾಯಗಳಿಗೆ ತುತ್ತಾಗುವ ಸಂಭವಗಳು ಹೆಚ್ಚಿರುತ್ತವೆ. ಅಷ್ಟರಮಟ್ಟಿಗೆ ರಾಷ್ಟ್ರೀಯತೆ ಲೇಖಕನ ಪ್ರಜ್ಞೆಯನ್ನು ಕುಗ್ಗಿಸುತ್ತದೆ. ಇಂಥ ಅಪಾಯಗಳಿಂದ ಪಾರಾಗಲು ಲೇಖಕನಿಗೆ ಸ್ಪಷ್ಟ ಸಮಾಜವಾದಿ ಜೀವನದರ್ಶನ" ಹಾಗೂ "ಉತ್ಕಟವಾದ ಸೃಜನಶೀಲ ಅನ್ವೇಷಣೆಯು" ಸಹಾಯಕವಾಗುವ ಅಂಶಗಳು ಎಂದು ಡಿ.ಆರ್.ನಾಗರಾಜ್ ಅಭಿಪ್ರಾಯ ಪಡುತ್ತಾರೆ. ಕನ್ನಡ ನವೋದಯ ಲೇಖಕರು ರಾಷ್ಟ್ರೀಯತೆಯಿಂದ ಉದ್ಭವವಾಗುವ ಈ ಅಪಾಯಗಳನ್ನು ಮತಾಂತರಕ್ಕೆ ಸಂಬಂಧಿಸಿದಂತೆ ಹೇಗೆ ಮೀರಿದ್ದಾರೆ ಎಂದು ಶೋಧಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

## ಅಧ್ಯಯನದ ತಾತ್ವಿಕ ಚೌಕಟ್ಟು :

ನವೋದಯ ಕಾಲಘಟ್ಟ ಹಾಗೂ ವರ್ತಮಾನದಲ್ಲಿ ನಡೆಯುತ್ತಿರುವ ಮತಾಂತರದ ಚರ್ಚೆಯಲ್ಲಿ ಪ್ರಮುಖವಾದ ಎರಡು ನೋಟಕ್ರಮಗಳನ್ನು ಗುರ್ತಿಸಬಹುದಾಗಿದೆ. ಅವುಗಳೆಂದರೆ, ಒಂದು; ಮತಾಂತರಕ್ಕಿರುವ ಚಾರಿತ್ರಿಕ ಸ್ವರೂಪವನ್ನು ರೂಪಿಸುವುದು. ಎರಡು, ಮತಾಂತರದ ವರ್ತಮಾನ ಸ್ವರೂಪವನ್ನು ಆಧರಿಸಿ ಅದಕ್ಕೆ ಪ್ರತಿಕ್ರಿಯಿಸುವುದು. ಈ ಎರಡು ನೋಟಕ್ರಮಗಳಲ್ಲಿ ನವೋದಯವು ಎರಡನೆಯ ನೋಟಕ್ರಮಕ್ಕೆ ಸಂಬಂಧಿಸಿದ್ದಾಗಿದೆ. ಇದಕ್ಕೆ ಮತಾಂತರದ ಚಾರಿತ್ರಿಕ ಸ್ವರೂಪದ ಅಗತ್ಯವಿಲ್ಲ. ಬದಲಾಗಿ ಅದು ವರ್ತಮಾನದಲ್ಲಿ ಹೊಂದಿರುವ ಸ್ವರೂಪ ಹಾಗೂ ಸ್ವಭಾವಗಳನ್ನು ಕುರಿತಂತೆ ಪ್ರತಿಕ್ರಿಯಿಸುತ್ತದೆ. ಹೀಗಾಗಿಯೇ ನವೋದಯ

ಸಾಹಿತ್ಯವು ಮತಾಂತರವು ವಸಾಹತುಶಾಹಿಯ ಆಕ್ರಮಣಕಾರಿ ನೆಲೆಗಳಲ್ಲಿ ಪ್ರಕಟಗೊಳ್ಳುವ, ಸ್ಥಳೀಯ ಪರಂಪರೆಯ ನಾಶ ಮಾಡುವ ಗುಣ ಹೊಂದಿರುವ ಅಪಾಯಕಾರಿ ಅಂಶವೆಂದು ಅದರ ವಿರುದ್ಧ ಪ್ರತಿರೋಧವನ್ನು ರೂಪಿಸುತ್ತದೆ.

ಪ್ರಸ್ತುತ ಮತಾಂತರದ ಚರ್ಚೆಯು ಮೇಲಿನ ನೋಟಕ್ರಮಗಳಲ್ಲಿ ಮೊದಲನೆಯದನ್ನು ಆರಿಸಿಕೊಳ್ಳುತ್ತದೆ. ಅಂದರೆ ಮತಾಂತರಕ್ಕಿರುವ ಚಾರಿತ್ರಿಕ ಸ್ವರೂಪವನ್ನು ಗ್ರಹಿಸಿ, ವರ್ತಮಾನದಲ್ಲಿ ಮತಾಂತರಕ್ಕೆ ಒಂದು ತಾತ್ವಿಕ ಚೌಕಟ್ಟನ್ನು ರೂಪಿಸಲು ಪ್ರಸ್ತುತ ಚರ್ಚೆ ತೊಡಗುತ್ತದೆ. ಈ ನೋಟ ಕ್ರಮದಲ್ಲಿ ಇಂದು ಎರಡು ಮಾದರಿಗಳು ರೂಪುಗೊಂಡಿವೆ. ಅವುಗಳಲ್ಲಿ, ಮೊದಲನೆಯದು; ಮತಾಂತರ ಒಂದು ಸಾಮಾಜಿಕ ಪಿಡುಗು ಎಂದು ಅರ್ಥೈಸುವುದು. ಇದು ಚಾರಿತ್ರಿಕವಾಗಿ ಮತಾಂತರವು ಒಳಗೊಂಡಿರುವ ಆಕ್ರಮಣಕಾರಿ ಹಾಗೂ ಕ್ರೌರ್ಯಗಳ ಪ್ರವೃತ್ತಿಯನ್ನುಳ್ಳದ್ದಾಗಿ ಗ್ರಹಿಸುತ್ತದೆ. ಈ ಮಾದರಿಯು ಮತಾಂತರಕ್ಕಿರುವ ಚಾರಿತ್ರಿಕ ಸ್ವರೂಪವನ್ನು ಮಧ್ಯಕಾಲೀನ ಸಂದರ್ಭದಿಂದ ಈಚೆಗೆ ಗುರ್ತಿಸಿಕೊಳ್ಳುತ್ತದೆ. ಇನ್ನು ಎರಡನೆಯದು; ಮತಾಂತರ ಒಂದು ಬಿಡುಗಡೆಯ ದಾರಿ ಎಂದು ಅರ್ಥೈಸುವ ಮಾದರಿ. ಇದು ಇಲ್ಲಿನ ಸಾಮಾಜಿಕ ಏಣಿಶ್ರೇಣೀಕರಣ ವ್ಯವಸ್ಥೆಯಿಂದ ಶೋಷಣೆಗೊಳಗಾದ ಸಮುದಾಯಗಳು ವರ್ತಮಾನದಲ್ಲಿ ಅದರಿಂದ ಬಿಡುಗಡೆಗೊಳ್ಳುವ ಆಸ್ಥೆಯನ್ನು ತೋರಿ ಮತಾಂತರವಾಗುತ್ತಿವೆ. ವ್ಯಕ್ತಿ ಯಾವುದೇ ಧರ್ಮವನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವುಳ್ಳವನಾಗಿರುತ್ತಾನೆ. ಇದು ಸಮಾಜದ ಸಾಮಾಜಿಕ ಅಸಮಾನತೆಗಳ ಸ್ವರೂಪವನ್ನು ವಿಶ್ಲೇಷಿಸುತ್ತಾ ಮತಾಂತರವನ್ನು ಪ್ರೋತ್ಸಾಹಿಸುತ್ತದೆ. ಈ ಮಾದರಿಯು ಮತಾಂತರಕ್ಕಿರುವ ಚರಿತ್ರೆಯನ್ನು ಆರ್ಯರ ಆಕ್ರಮಣ ಕಾಲಘಟ್ಟದಿಂದಲೂ ಗುರ್ತಿಸುತ್ತದೆ.

ಪ್ರಸ್ತುತ ಮತಾಂತರ ಚರ್ಚೆಯಲ್ಲಿ 'ಬಹುಸಂಖ್ಯಾತ' ಮತ್ತು 'ಅಲ್ಪಸಂಖ್ಯಾತ' ಎಂಬ ಎರಡು ಪರಿಕಲ್ಪನೆಗಳು ಬಳಕೆಯಾಗುತ್ತಿರುವುದನ್ನು ಕಾಣಬಹುದು. ಮತಾಂತರದ ದಾಳಿಗೆ ಸಿಕ್ಕಿ ಬಹುಸಂಖ್ಯಾತವಾಗಿರುವ ಹಿಂದೂಧರ್ಮ ಅಸ್ಥಿರಗೊಳ್ಳುತ್ತಿರುವ ಆತಂಕವನ್ನು ಮತಾಂತರ ವಿರೋಧಿ ಚಿಂತನೆ ಪ್ರಕಟಪಡಿಸುತ್ತದೆ. ಬಹುಸಂಖ್ಯಾತರ ಧರ್ಮವನ್ನು ರಕ್ಷಿಸಲು ಅಲ್ಪಸಂಖ್ಯಾತ ವರ್ಗಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವ ಮನೋಧರ್ಮವನ್ನು ಇದು ವ್ಯಕ್ತಪಡಿಸುತ್ತದೆ. ಇದಕ್ಕೆ

ಪ್ರತಿರೋಧವಾಗಿ ಹೆಚ್ಚುತ್ತಿರುವ ಕೋಮುವಾದವು ಅಲ್ಪಸಂಖ್ಯಾತ ವರ್ಗಗಳನ್ನು ಆತಂಕಕ್ಕೊಳಕು ಮಾಡುತ್ತಿದೆ. ಇದರಿಂದ ಅಲ್ಪಸಂಖ್ಯಾತ ವರ್ಗಗಳಿಗೆ ಬೆಂಬಲವನ್ನು ವ್ಯಕ್ತಪಡಿಸುತ್ತದೆ. ಈ ಎರಡು ಪರಿಕಲ್ಪನೆಗಳಲ್ಲಿನ ಪರಸ್ಪರ ವೈರುಧ್ಯತೆಗಳು ಮತಾಂತರವನ್ನು ವಿರೋಧಿಸುವ ಹಾಗೂ ಪ್ರೋತ್ಸಾಹಿಸುವ ಗುಣಗಳನ್ನು ಪ್ರಕಟಪಡಿಸುತ್ತವೆ.

ಮತಾಂತರಕ್ಕಿರುವ ಸಾಧ್ಯತೆಗಳಲ್ಲಿ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಕಾರಣಗಳನ್ನು ಚರಿತ್ರೆಯಲ್ಲಿ ಕಾಣುತ್ತೇವೆ. ವೈದಿಕಧರ್ಮದಲ್ಲಿ ಹಿಂಸೆ, ಅಸಮಾನತೆಗಳನ್ನು ವಿರೋಧಿಸಿ ಹುಟ್ಟಿದ ಬೌದ್ಧ, ಜೈನ, ವೀರಶೈವಧರ್ಮಗಳು ಪ್ರಮುಖವಾಗಿ ಒತ್ತಾಯಿಸುವ ಈ ಮೇಲಿನ ಕಾರಣಗಳು ಸಮಾನತೆಗಾಗಿ. ವೈದಿಕ ಧರ್ಮದಲ್ಲಿ ಅಸಮಾನತೆಗಳು ರೂಪುಗೊಂಡಿರುವುದೇ ಆರ್ಥಿಕ–ರಾಜಕೀಯ ಉದ್ದೇಶಗಳಿಗಾಗಿ. ಎಲ್ಲ ಸಮುದಾಯಗಳನ್ನು ಆರ್ಥಿಕ ಮತ್ತು ರಾಜಕೀಯವಾಗಿ ಸಮಾನತೆಯೆಡೆಗೆ ಕೊಂಡೊಯ್ಯುವ ಸಾಧನವಾಗಿ ಮತಾಂತರ ಪ್ರಕ್ರಿಯೆಯನ್ನು ವೈದಿಕ ಧರ್ಮಕ್ಕೆ ಪ್ರತಿರೋಧವಾಗಿ ರೂಪಿಸಲಾಗಿದೆ. ಹಾಗಾಗಿ ಇದು ಮೂಲಭೂತವಾಗಿ ಸಾಮಾಜಿಕ ಸಮಾನತೆಗಾಗಿ ನಡೆಸುವ ಸಂಘರ್ಷಕ್ಕೆ ಸಂಬಂಧಿಸಿದುದು.

ಮತಾಂತರದ ಚರಿತ್ರೆಯನ್ನು ಪ್ರಮುಖವಾಗಿ ಎರಡು ಭಾಗಗಳಾಗಿ ಗುರ್ತಿಸಬಹುದು. ಒಂದು: ಭಾರತೀಯ ಸಂದರ್ಭದಲ್ಲಿ ವೈದಿಕಶಾಹಿಯ ಹಿಂಸ್ರಕ ರೂಪಗಳು ಹಾಗೂ ಸಾಮಾಜಿಕ ಏಣಿಶ್ರೇಣಿ ವ್ಯವಸ್ಥೆಯನ್ನು ವಿರೋಧಿಸಿ ಹುಟ್ಟಿದ ಹೊಸ ಧರ್ಮಗಳು ಮಾಡಿದ ಮತಾಂತರ ಪ್ರಕ್ರಿಯೆ. ಎರಡು : ಭಾರತಕ್ಕೆ ವಲಸೆ ಬಂದ ಧರ್ಮಗಳು ತಮ್ಮ ರಾಜಕೀಯ ಉದ್ದೇಶಗಳಿಗೆ ಇಲ್ಲಿನ ಸಮುದಾಯಗಳು ಮತಾಂತರಿಸುವ ಕೆಲಸ ಮಾಡಿದ್ದು ಈ ಎರಡೂ ಪ್ರಕ್ರಿಯೆಗಳಲ್ಲಿ ಒಂದು ಸಾಮಾನ್ಯ ಅಂಶವು ಮತಾಂತರಕ್ಕೆ ಪ್ರೇರೇಪಣೆ ಮಾಡಿರುವುದನ್ನು ಗುರ್ತಿಸಬಹುದು. ಅದೇನೆಂದರೆ, ಹಿಂದೂ ಧರ್ಮ ಅಥವಾ ವೈದಿಕ ಧರ್ಮದೊಳಗಿದ್ದ ಏಣಿಶ್ರೇಣೀಕರಣ ವ್ಯವಸ್ಥೆಯನ್ನು ಬಳಸಿಕೊಂಡ ಇವು ಮತಾಂತರ ಪ್ರಕ್ರಿಯೆಯಲ್ಲಿ ತೊಡಗಿರುವುದು. ಇಂದು ಆಮಿಷ ಹಾಗೂ ಬಲತ್ಕಾರಕ್ಕೆ ಒಳಗು ಮಾಡಿ ಇಲ್ಲಿನ ಸಮುದಾಯಗಳನ್ನು ಮತಾಂತರಿಸಲಾಗುತ್ತಿದೆ ಎಂದು ಹೇಳುವಾಗ, ವೈದಿಕಶಾಹಿ ವ್ಯವಸ್ಥೆಯ ಅಸಮಾನತೆಗಳಿಗೆ ವಿರೋಧವು ಸಮುದಾಯಗಳೊಳಗೆ ಸುಪ್ತವಾಗಿದ್ದು, ಇಲ್ಲಿಂದ

ಬಿಡುಗಡೆಗೊಳ್ಳಬಹುದಾದ ಅವಕಾಶಗಳೊದಗಿದಾಗ ಮತಾಂತರಗೊಂಡಿರುವುದನ್ನು ಕಾಣಬಹುದು. ಇಲ್ಲಿನ ವರ್ಣ ಹಾಗೂ ಜಾತಿಯ ಅಸಮಾನತೆಯ ಅಂಶಗಳು ಮತಾಂತರದ ಚರಿತ್ರೆಗೆ ಕಾರಣವಾಗುತ್ತವೆ.

ವೈದಿಕ ಧರ್ಮದೊಳಗಿನ ವರ್ಣವ್ಯವಸ್ಥೆ ಹಾಗೂ ಜಾತಿ ವ್ಯವಸ್ಥೆಗಳು ಮತಾಂತರಕ್ಕೆ ಕಾರಣವಾಗಿರುವ ಚಾರಿತ್ರಿಕತೆಯನ್ನು ಹಾಗೂ ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳು ತಮ್ಮ ಸಾಮ್ರಾಜ್ಯಶಾಹಿ ಧೋರಣೆಯಿಂದ ಮತಾಂತರ ಪ್ರಕ್ರಿಯೆಯಲ್ಲಿ ತೊಡಗಿದ ಚಾರಿತ್ರಿಕತೆಗಳನ್ನು ಇಂದು ವಿಶ್ಲೇಷಿಸುವ ಅಗತ್ಯವಿದೆ. ವೈದಿಕ ಧರ್ಮವನ್ನು ವಿರೋಧಿಸಿ ಭಾರತದಲ್ಲಿ ಹುಟ್ಟಿದ ಬೌದ್ಧ, ಜೈನ, ವೀರಶೈವಧರ್ಮಗಳ ಚಾರಿತ್ರಿಕ ಸಂದರ್ಭಗಳನ್ನು ವಿಶ್ಲೇಷಿಸುವುದು ಅಗತ್ಯವೆನಿಸುತ್ತದೆ. ಹಾಗಾಗಿ ಮತಾಂತರದ ಚಾರಿತ್ರಿಕ ಸ್ವರೂಪವನ್ನು ಹಾಗೂ ಅದರ ವರ್ತಮಾನದ ಸ್ವರೂಪವನ್ನು ಅಧ್ಯಯನಿಸುವ ಕೆಲಸವನ್ನು ಈ ಅಧ್ಯಯನ ಮಾಡುತ್ತದೆ.

ಮತಾಂತರಕ್ಕೆ ನವೋದಯ ಕಾಲಘಟ್ಟ ಪ್ರತಿಕ್ರಿಯಿಸಿದ ರೀತಿಯನ್ನು ಅದು ವರ್ತಮಾನದ ಸಾಮ್ರಾಜ್ಯಶಾಹಿ ವಿರುದ್ಧ ತೋರಿದ ಧೋರಣೆಯೇ ಆಗಿದೆ ಎಂದು ಈ ಅಧ್ಯಯನ ನಂಬುತ್ತದೆ. ವಸಾಹತುಶಾಹಿಯಿಂದ ರೂಪುಗೊಂಡ ಆಧುನಿಕ ರಾಷ್ಟ್ರೀಯತೆಯ ಪ್ರಜ್ಞೆ ತನ್ನ ನಾಡಿನಲ್ಲಿದ್ದ ವರ್ಣ-ವರ್ಗ ಸಂಘರ್ಷಗಳ ವಿರುದ್ಧ ಸಮರ್ಥವಾಗಿ ಪ್ರತಿರೋಧಿಸಲಿಲ್ಲ. ಇದಕ್ಕಿದ್ದ ವಸಾಹತುಶಾಹಿಯ ಐತಿಹಾಸಿಕ ಒತ್ತಡಗಳನ್ನು ಶೋಧಿಸುವುದು ಈ ಅಧ್ಯಯನದ ತಾತ್ವಿಕತೆಯಾಗಿದೆ.

**ಆಕರ ಸಾಮಗ್ರಿ :**

ಪ್ರಸ್ತುತ ಅಧ್ಯಯನದಲ್ಲಿ ಮತಾಂತರಕ್ಕೆ ಸಂಬಂಧಿಸಿದ ಆಯ್ದ ಕಾದಂಬರಿಗಳನ್ನು ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ. ಇವುಗಳ ಜೊತೆಗೆ ನವೋದಯ ಕಾಲಘಟ್ಟದ ಸಣ್ಣಕಥೆಗಳನ್ನು ಪೂರಕವಾಗಿ ಬಳಸಲಾಗುತ್ತದೆ.

ಈ ಅಧ್ಯಯನವು ವರ್ತಮಾನದ ಮತಾಂತರದ ಚರ್ಚೆಗೆ ನವೋದಯ ಕಾದಂಬರಿಗಳಿಂದ ಗೋಚರಿಸಬಹುದಾದ ಹೊಸ ತಾತ್ವಿಕ ನೆಲೆಗಳನ್ನು

ಶೋಧಿಸುವುದಾಗಿದೆ. ಹಾಗಾಗಿ ಮತಾಂತರ ಪ್ರಕ್ರಿಯೆಯು ಒಳಗೊಂಡಿರುವ ಚಾರಿತ್ರಿಕತೆಯ ವಿಶ್ಲೇಷಣೆ ನವೋದಯ ಕಾದಂಬರಿಗಳಲ್ಲಿನ ಮತಾಂತರ ಚರ್ಚೆಗೆ ಹಾಗೂ ವರ್ತಮಾನದಲ್ಲಿನ ಮತಾಂತರ ಚರ್ಚೆಗೆ ಹೊಸ ಒಳನೋಟಗಳನ್ನು ಒದಗಿಸಬಹುದೆಂಬುದರಿಂದ ಮತಾಂತರದ ರಾಜಕೀಯ ಇತಿಹಾಸವನ್ನು ಸ್ಥೂಲವಾಗಿ ಈ ಅಧ್ಯಯನ ಆಕರವಾಗಿ ಬಳಸುತ್ತದೆ.

ಒಟ್ಟಾರೆ ಈ ಅಧ್ಯಯನವು ಮತಾಂತರದ ಚರ್ಚೆಯಲ್ಲಿ ಎರಡು ಭಿನ್ನಕಾಲಘಟ್ಟಗಳ ಪಾಲ್ಗೊಳ್ಳುವಿಕೆಯ ಜೊತೆಗೆ ನಡೆಸಬಹುದಾದ ಅನುಸಂಧಾನದ ಸಾಧ್ಯತೆಗಳನ್ನು ಹುಡುಕಾಟ ನಡೆಸುತ್ತದೆ.

## ಟಿಪ್ಪಣಿಗಳು

೧. ವಸಾಹತುಶಾಹಿ ಅನುಭವ ಮತ್ತು ಕನ್ನಡ ಕಾದಂಬರಿಗಳು, ಪುಟ-೦೭

೨. ಅದೇ. ಪುಟ – ೧೬

೩. ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ, ಪುಟ-೮

೪. ಬಹುಮುಖ – ೧೨

೫. ಅದೇ. ಪುಟ – ೧೩

೬. ಕಾಲುದಾರಿ, ಪುಟ-೧೨೦

೭. ಕಾಲುದಾರಿ-೧೨೧

೮. ಅಮೃತ ಮತ್ತು ಗರುಡ-೨೯

## ಅಧ್ಯಾಯ-೨

## ಮತಾಂತರ ಇತಿಹಾಸ ಸ್ವರೂಪದ ವಿಶ್ಲೇಷಣೆ

ಭಾರತದ ಪ್ರಾಚೀನ ಚರಿತ್ರೆಯನ್ನು ಅರಿಯಲು ವೇದಗಳನ್ನು ಆಥೆಂಟಿಕ್ ಆಕರಗಳಾಗಿ ಇದುವರೆವಿಗೂ ಬಳಸಲಾಗುತ್ತ ಬರಲಾಗಿದೆ. ವೇದಗಳಿಗೂ ಹಿಂದಿನ ಚರಿತ್ರೆಯನ್ನು ಅರಿಯಲು ಕೂಡ ವೇದಗಳನ್ನೇ ಇಂದಿಗೂ ಪ್ರಮಾಣಗಳಾಗಿ ಬಳಸಲಾಗುತ್ತಿದೆ. ವೇದಗಳಲ್ಲಿನ ಕೆಲವು ಭಾಗಗಳಿಂದ ವೇದಪೂರ್ವ ಕಾಲವನ್ನು ಕಲ್ಪಿಸಿಕೊಳ್ಳಲಾಗಿದೆ. ಈ ಚರಿತ್ರೆಯನ್ನು ಅರಿಯುವುದು ಇಂದಿಗೂ ಸಮಸ್ಯಾತ್ಮಕವಾಗಿಯೇ ಉಳಿದಿದೆ. ಅವುಗಳಲ್ಲಿನ ವಿವರಗಳು ಸಂಕೇತಾತ್ಮಕವಾದವುಗಳು. ಅದರಲ್ಲಿಯೂ ವೈದಿಕೇತರ ಜನವರ್ಗಗಳ ಬಗ್ಗೆ ತಿಳಿಯುವಾಗ ವೇದಗಳು ವಿವರಗಳನ್ನು ಸಂಕೇತಗಳಲ್ಲಿ ಅಡಗಿಸಿಡುತ್ತವೆ. ಇದನ್ನು ಡಿ.ಆರ್.ನಾಗರಾಜ್‌ರವರು ಭಾರತೀಯ ನಾಸ್ತಿಕ ದರ್ಶನಗಳ ಬಗ್ಗೆ ಬರೆಯುತ್ತಾ ಒಂದು ವಿವರಣೆ ಕೊಡುತ್ತಾರೆ, ಆ ವಿವರಣೆ : "ಸಾಮ ವೇದದಲ್ಲಿ ಬಹಳ ನಿಗೂಢವಾದ ಒಂದು ಪ್ರಸ್ತಾಪ ಬರುತ್ತೆ. ದೀರ್ಘಜಿಹ್ವಾ ಅಂದರೆ ಉದ್ದ ನಾಲಗೆಯ ಪ್ರಾಣಿಯೊಂದು ಯಜ್ಞದ ವೇದಿಕೆಯ ಸುತ್ತ ಸುಳಿದಾಡುತ್ತಾ ಇರುತ್ತದೆ. ವೇದಗಳು ಅಂದರೆ; ಅದು ಯಜ್ಞಕುಂಡದ ಸುತ್ತ ನಡೆಯುವ ಒಂದು ಪ್ರಾರ್ಥನೆ ಮತ್ತು ಆವಾಹನೆ, ಆವಾಹನೆ ಆದ ಮೇಲೆ ಅದರಲ್ಲೇ ವಿಸರ್ಜನೆಯೂ ಅಡಗಿರುತ್ತೆ. ವೇದಗಳಲ್ಲಿರುವ ಅನುಭವಗಳನ್ನು ನೋಡುತ್ತಾ ಹೋದರೆ ಋತ್ವಿಕರು ದಿಗ್ಭ್ರಮೆಗೊಂಡು, ಭೀತರಾದ ಭಾಗಗಳು ಅನೇಕವು ಬರುತ್ತವೆ. ಋತ್ವಿಕರು ಯಾಗ ಮಾಡುತ್ತಾ ಕೂತಿರುತ್ತಾರೆ. ಇದ್ದಕ್ಕಿದ್ದಂತೆ ಮಂತ್ರದೊಳಗಡೆ ಒಂದು ಭೀತಿಯ ಛಾಯೆ ಅನ್ನೋದು ಸಂಚರಿಸೋಕೆ ಪ್ರಾರಂಭವಾಗುತ್ತೇ- ಇಡೀ ವಾತಾವರಣ ಥಟಕ್ಕಂತ ಉದ್ವಿಗ್ನವಾಗೋದನ್ನು ಆ ಮಂತ್ರದೊಳಗಡೆಗೆ ನಾವು ಕಾಣುತ್ತೀವೆ. ಏನದು ಅಂತ ಅಂದರೆ ಯಾವುದೋ ಒಂದು ಉದ್ದ ನಾಲಗೆಯ ಪ್ರಾಣಿ ಸುತ್ತು ಹಾಕುತ್ತಾ ಇದೆ. ಏನಿದು, ಯಾವ ಪ್ರಾಣಿಯದು- ಯಾಕೆ ಹೀಗೆ ಕಾಡುತ್ತಾ ಇದೆ? ಆ ಭೀತಿಯ ಎಳೆ ಅನ್ನೋದು ಸಾಮವೇದದ ಆ ಮಂತ್ರಗಳಲ್ಲಿ ಕಾಣುತ್ತದೆ. ಅನೇಕ ಕಡೆಗೆ ಈ ರೆಫರೆನ್ಸ್ ಇದೆ..... ಈ ಉದ್ದ ನಾಲಗೆಯ ಪ್ರಾಣಿ ಯಾವುದು ?

ಯಜ್ಞಕ್ಕೆ ಧಕ್ಕೆ ತರುವ ಅಥವಾ ಯಜ್ಞಕ್ಕೆ ವಿಘ್ನ ಉಂಟುಮಾಡುವ ಒಂದು ಪ್ರಾಣಿ ಇದು. ಎಷ್ಟು ದೀರ್ಘ ನಾಲಗೆಯ ಪ್ರಾಣಿ ಅಂತಂದರೆ ಸ್ವಲ್ಪ ಎಚ್ಚರ ತಪ್ಪಿದರೆ

ಋತ್ವಕರನ್ನ, ಹವಿಸ್ಸನ್ನ, ಯಜ್ಞಕುಂಡವನ್ನ, ಒಟ್ಟಿಗೇ ಮಲಿನಗೊಳಿಸಬಲ್ಲ ಅಥವಾ ಹೆಚ್ಚು ಕಡಿಮೆ ಆದರೆ ಇವೆಲ್ಲವನ್ನೂ ತಿಂದು ಹಾಕಬಲ್ಲ ಒಂದು ಪ್ರಾಣಿ. ಇದು ವೇದದ ಜಗತ್ತಿನಲ್ಲೇ ಅಡಕವಾಗಿರುವ, ಆ ಯಜ್ಞಯಾಗಾದಿಗಳನ್ನು ಧಿಕ್ಕರಿಸುವ ನಾಸ್ತಿಕವಾದದ ಒಂದು ಶಕ್ತಿ ಏನಿತ್ತು ಅದನ್ನು ಈ ಉದ್ದ ನಾಲಗೆಯ ಪ್ರಾಣಿ ಅನ್ನೋದರ ಮೂಲಕ ಸಂಕೇತಿಸಲಾಗಿದೆ"[೧]. ಹೀಗಿದೆ ಈ ರೀತಿಯ ನಿಗೂಢಮಯ ವಿವರಣೆಗಳ ಮೂಲಕ ಭಾರತದ ಪ್ರಾಚೀನ ಚರಿತ್ರೆಯನ್ನು ಕಲ್ಪಿಸಲಾಗಿದೆ ಅಥವಾ ಪುನರ್ ಸಂಘಟಿಸಲಾಗಿದೆ.

ವೇದ ಪೂರ್ವ ಇತಿಹಾಸವನ್ನು ತಿಳಿಯಲು ಬಳಸುವ ಇನ್ನೊಂದು ಪ್ರಮುಖ ಆಕರವೆಂದರೆ ನಾಗರಿಕತೆಯದ್ದು. ಸಿಂಧೂ ಬಯಲಿನ ನಾಗರೀಕತೆಯನ್ನು ವೇದಪೂರ್ಣ ಇತಿಹಾಸವೆಂದು ಗುರುತಿಸುತ್ತಾರೆ. "ಸಿಂದೂ ನಾಗರೀಕತೆ ಅಥವಾ ಹರಪ್ಪನ್ ನಾಗರೀಕತೆ ಕ್ರಿಸ್ತ ಪೂರ್ವ ಮೂರು ಸಹಸ್ರ ವರ್ಷಗಳ ಮಧ್ಯಭಾಗದಲ್ಲಿ, ಈಗಿನ ಪಾಕಿಸ್ತಾನ ಮತ್ತು ವಾಯುವ್ಯ ಭಾರತದ ಸಿಂಧೂ ಕಣಿವೆಯ ಬಯಲು ಪ್ರದೇಶದಲ್ಲಿ ಕಾಣಿಸಿಕೊಂಡಿತು. ಈಗ ಪೂರ್ಣ ವಿಕಸಿತ ಹರಪ್ಪನ್ ಸಂಸ್ಕೃತಿಯ ದಿನಾಂಕವನ್ನು ಕ್ರಿಸ್ತಪೂರ್ವ ೨೫೦೦ ರಿಂದ ೨೦೦೦ ಎಂದು ಅಂದಾಜು ಮಾಡಲಾಗಿದೆ"[೨]. ಈ ಕಾಲದಲ್ಲಿದ್ದಂತಹ ಧರ್ಮದ ಚರ್ಚೆಯನ್ನು ಇದುವರೆಗೂ ಅಲ್ಲಿ ಸಿಕ್ಕಿರುವ ಸ್ಮಾರಕಗಳು ಹಾಗೂ ಪ್ರತಿಮೆಗಳ ಮೂಲಕ ಅಂದಾಜಿಸಲಾಗಿದೆ. ಈ ಅಂದಾಜಿನ ಪ್ರಕಾರ "ಹರಪ್ಪ ಮತ್ತು ಮೊಹೆಂಜೋದಾರೋಗಳಲ್ಲಿ ಸ್ಮಾರಕಗಳಾಗಿ ಉಳಿದಿರುವ ಕೆಲವು ಕಟ್ಟಡಗಳನ್ನು ದೇವಸ್ಥಾನಗಳೆಂದು ಗುರುತಿಸಲಾಗಿದೆ. ಹರಪ್ಪ ಪ್ರದೇಶದ ತುಂಬ ಒಡವೆಗಳನ್ನು ಧರಿಸಿರುವ ಜೇಡಿಮಣ್ಣಿನ ಹೆಣ್ಣು ಪ್ರತಿಮೆಗಳು ಸಾಕಷ್ಟು ದೊರೆತಿವೆ. ಪ್ರಾಚೀನ ಕಾಲದಿಂದಲೂ ಪಶ್ಚಿಮ ಏಷ್ಯದಲ್ಲಿ ಪೂಜಿಸುತ್ತಾ ಬಂದಿರುವ ಆದಿಶಕ್ತಿಯೊಂದಿಗೆ ಹೋಲಿಸಲಾಗಿದೆ. ಶಿಶ್ನಪೂಜೆ ಮಾಡುತ್ತಿದ್ದರು ಎಂಬುದಕ್ಕೆ ಸಹ ಪುರಾವೆಗಳಿವೆ. ಮೊಹರುಗಳ ಮೇಲೆ ಸಾಮಾನ್ಯವಾಗಿ ಒಂದು ಧಾರ್ಮಿಕ ನಂಬಿಕೆಯ ಬಗ್ಗೆ ಮಾಹಿತಿ ಸಿಗುತ್ತದೆ. ಅನೇಕ ಧಾರ್ಮಿಕ ಆಚರಣೆಗಳ ಬಗ್ಗೆ ಅವು ತಿಳಿಸುತ್ತವೆ. ಉದಾಹರಣೆಗೆ. ಒಂದು ಪ್ರಖ್ಯಾತ ಮೊಹರಿನ ಮೇಲೆ ಕೊಂಬುಗಳಿರುವ ದೇವತೆಯೆಂದು ಯೋಗ ಭಂಗಿಯಲ್ಲಿ ಕುಳಿತಿದ್ದು ಅದರ ಸುತ್ತಾ ಅನೇಕ ಸಂಖ್ಯೆಯಲ್ಲಿ ಪ್ರಾಣಿಗಳಿದ್ದು, ಅದನ್ನು ಸರ್‌ಜಾನ್ ಮಾರ್ಷಲ್ ಅವರು ಪಶುಪತಿ ದೇವರು ಎಂದು ಗುರುತಿಸಿದ್ದಾರೆ. ಇನ್ನೊಂದು ಮೊಹರಿನ ಮೇಲೆ ಒಬ್ಬ ಯೋಗಿ ಹಾಗೂ ಹೆಡೆಬಿಚ್ಚಿದ ನಾಗರಹಾವಿನ ಚಿತ್ರವಿದೆ. ಇನ್ನೂ ಅನೇಕ ಮೊಹರುಗಳ

ಮೇಲೆ ಆಲ ಅಥವಾ ಇತರ ವೃಕ್ಷದೊಡನೆ ವೃಕ್ಷದೇವತೆಯನ್ನು ಚಿತ್ರಿಸಲಾಗಿದೆ"[೩]. ಈ ವಿವರಗಳ ಜೊತೆಗೆ ಸಿಂಧೂ ಸಂಸ್ಕೃತಿಯ ಧಾರ್ಮಿಕ ಆಚರಣೆಗಳ ಸಂಕೇತಗಳಾಗಿ ಮೊಹರುಗಳ ಮೇಲೆ ಪ್ರಾಣಿ ಚಿತ್ರಗಳನ್ನು, ಸ್ವಸ್ತಿಕ್ ಚಿತ್ರಗಳನ್ನು ಕೆತ್ತಲಾಗಿರುವುದನ್ನು ಕಾಣುತ್ತೇವೆ. ಈ ವಿವರಣೆಯು ಸಿಂಧೂ ನಾಗರೀಕತೆಯು ಯೌಗಿಕ ಆಚರಣೆಗಳ ಕೇಂದ್ರವಾಗಿತ್ತು ಎಂದು ತಿಳಿಸುತ್ತದೆ. ಈ ಆಚರಣೆಗಳು ಇಂದಿಗೂ ಸಮುದಾಯಗಳಲ್ಲಿ ಅಥವಾ ಸಿದ್ಧ ಪಂಥಗಳಲ್ಲಿ ಕಾಣಸಿಗುವುದನ್ನು ಗಮನಿಸಿ ಅವು ಆರ್ಯಪೂರ್ವ ಅಥವಾ ವೇದಪೂರ್ವ ಇತಿಹಾಸದ ಸಂಕೇತಗಳಾಗಿ ಗುರುತಿಸಬಹುದು.

ಇಂದಿನ ಕುಲಮೂಲೀಯ ಸಂಕಥನಗಳ ಚಿಂತನೆಯು ನಡೆಸುವ ಅಧ್ಯಯನ ಸಿಂಧೂ ನಾಗರೀಕತೆಯಲ್ಲಿ ಅಥಾ ವೇದ ಪೂರ್ವ ಇತಿಹಾಸದಲ್ಲಿ ಕುಲಪದ್ಧತಿಯು ಆಚರಣೆಯಲ್ಲಿತ್ತು. ಆರ್ಯರ ಆಗಮನದಿಂದ ಇದು ನಾಶವಾಗಿ ಶ್ರೇಣೀಕೃತ ಸಾಮಾಜಿಕ ಸಂರಚನೆ ಜಾರಿಗೆ ಬಂತು ಎಂಬ ನೆಲೆಗೆ ತಲುಪುತ್ತದೆ. ಇದಕ್ಕೆ ಪೂರಕವಾಗಿ ಸಿಂಧೂ ನಾಗರಕತೆ ನಾಶವಾಗಿರಬಹುದಾದ ಸ್ವರೂಪವನ್ನು ಈ ಚಿಂತನೆ ಬಳಸಿಕೊಳ್ಳುತ್ತದೆ. ಸಿಂಧೂ ನಾಗರೀಕತೆಯ ಅವನತಿಯ ಕುರಿತಾಗಿ ವಿದ್ವಾಂಸರು ಅನೇಕ ಸಿದ್ಧಾಂತಗಳನ್ನು ಮಂಡಿಸಿದ್ದಾರೆ. ಈ ಸಿದ್ಧಾಂತಗಳ ಪ್ರಕಾರ ಸಿಂಧೂ ನಾಗರಿಕತೆಯ ಅವನತಿಗೆ ಕಾರಣಗಳು ಎರಡು, ಅವುಗಳೆಂದರೆ,

"ಎ. ನೈಸರ್ಗಿಕ ವಿಕೋಪದಿಂದಾಗಿ ವಿನಾಸ
ಬಿ. ನಾಗರೀಕತೆಯನ್ನು ನಾಶಗೊಳಿಸಿದಂಥ ಪೈಶಾಚಿಕ ಆಕ್ರಮಣ".

ನೈಸರ್ಗಿಕ ವಿಕೋಪದ ಸಿದ್ಧಾಂತಕ್ಕೆ ಬೆಂಬಲವಾಗಿ ಮೆಹಂಜೋದಾರೋದ ಪ್ರವಾಹವನ್ನು ಅನೇಕರು ಬಳಸಿದ್ದಾರೆ. ಅದು ಅನೇಕ ಪ್ರವಾಹಗಳನ್ನು ಎದುರಿಸಿದ್ದು, ಅದರಲ್ಲಿ ಕೆಲವು ಅತ್ಯಂತ ವಿನಾಶಕಾರಿಯಾಗಿದ್ದಿರಬೇಕೆಂದು ಕಂಡುಬಂದಿದೆ. ಸಿಂಧೂ ನದಿಯ ದಡದಲ್ಲಿ ನೆಲೆಸಿದ್ದ ನಗರಗಳಲ್ಲಿ ಬಂದ ಪ್ರವಾಹದ ಕಾರಣದಿಂದಾಗಿ ಸಿಂಧೂ ನಾಗರೀಕತೆ ಅಳಿದಿರಬೇಕು ಎಂದು ಕೆಲವು ವಿದ್ವಾಂಸರು ವಾದಿಸಿದ್ದಾರೆ.

ಎರಡನೆಯದಾಗಿ ಕರಾವಳಿ ಪ್ರದೇಶಗಳು ಉತ್ಕರ್ಷ ಹೊಂದಿ ಅದು ಸಿಂಧೂ ನಗರಗಳ ನಾಶಕ್ಕೆ ಹಾಗೂ ನದಿ ಮತ್ತು ಕರಾವಳಿ ಸಂಪರ್ಕವನ್ನು ಆಧರಿಸಿದ್ದ

ಉದಾಹರಣೆಗೆ ಲೋಥಲ್ ವಾಣಿಜ್ಯ ಜೀವನಕ್ಕೆ ಉಂಟು ಮಾಡಿದ ಕಾರಣವಾಗಿರಬಹುದೆಂದು ಹೇಳಲಾಗಿದೆ.

ಎರಡನೇ ಸಿದ್ಧಾಂತವನ್ನು ಮಂಡಿಸಿದವನು 'ಮಾರ್ಟಿಮರ್ ವ್ಹೀಲರ್' ಎಂಬಾತ. ಆರ್ಯರ ಆಕ್ರಮಣದಿಂದಾಗಿ ಸಿಂಧೂ ನಾಗರಿಕತೆ ನಾಶವಾಯಿತು ಎಂಬುದು ಇವನ ಅಭಿಪ್ರಾಯ. ಉತ್ಖನನ ಕಾಲದಲ್ಲಿ ಸರಿಯಾಗಿ ಹೂಳದೇ ರಸ್ತೆಗಳಲ್ಲಿ ಬಿದ್ದಿದ್ದ ಮಾನವ ಅಸ್ಥಿಪಂಜರಗಳು ಮೆಹೆಂಜೋದಾರೋದಲ್ಲಿ ದೊರೆತಿರುವುದು ಇದಕ್ಕೆ ಸಾಕ್ಷಿ ಎನುತ್ತಾನೆ"[೪].

ಈ ವಿವರಗಳ ಜೊತೆಗೆ ಕುಲಮೂಲೀಯ ಚಿಂತನೆಯು ಅಗ್ನಿ ಮತ್ತು ಜಲ ಸಂಸ್ಕೃತಿಗಳ ವಿಶ್ಲೇಷಣೆಯನ್ನು ಮಂಡಿಸುತ್ತದೆ. ಹರಪ್ಪ ಮತ್ತು ಮೆಹೆಂಜೋದಾರೋ ಸಂಸ್ಕೃತಿಗಳಲ್ಲಿ ನೀರಿಗೆ ಮಹತ್ವದ ಸ್ಥಾನವನ್ನು ಕೊಡುತ್ತಿದ್ದುದರ ಆಧಾರದ ಮೇಲೆ ಇಲ್ಲಿನ ಮೂಲನಿವಾಸಿಗಳು ಜಲ ಸಂಸ್ಕೃತಿಯ ಆರಾಧಕರು. ಆರ್ಯರು ಅಗ್ನಿ ಸಂಸ್ಕೃತಿಯ ಆರಾಧಕರು ಎಂಬ ಸಿದ್ಧಾಂತವನ್ನು ಮಂಡಿಸುತ್ತಾ ವೈದಿಕ ಮತ್ತು ಶ್ರಮಣಧಾರೆಗಳನ್ನು ಗುರುತಿಸುತ್ತದೆ. ಇವುಗಳಲ್ಲದೆ ಸಿಂಧೂ ನಾಗರೀಕತೆಯಲ್ಲಿನ ಶಾಕ್ತ ಆರಾಧನೆಯ ಮೂಲದಿಂದ ಮಾತೃಪ್ರಧಾನ ನೆಲೆಗಳ ಆಧಾರದ ಮೇಲೆ ವೇದ ಪೂರ್ವ ಇತಿಹಾಸವನ್ನು ಗುರುತಿಸಲಾಗುತ್ತದೆ.

ಸಿಂಧೂ ನಾಗರಿಕತೆಯಲ್ಲಿ ವೇದಕಾಲದ ವರ್ಣ ವ್ಯವಸ್ಥೆಯನ್ನು ಹೋಲುವ ನಾಲ್ಕು ವರ್ಗಗಳನ್ನು ಗುರುತಿಸಲಾಗುತ್ತದೆ ಎಂದು ಡಾ॥ ಎ.ಡಿ.ಪುಸಾಲ್ಕರ್ ಅಭಿಪ್ರಾಯಪಟ್ಟಿದ್ದಾರೆ. ಅವುಗಳೆಂದರೆ,

೧. ಪೂಜಾರಿಗಳು, ವೈದ್ಯರು ಹಾಗೂ ಜ್ಯೋತಿಷಿಗಳ ವಿದ್ಯಾವಂತ ವರ್ಗ
೨. ನಾಗರೀಕರ ಸಂರಕ್ಷಣಾ ಜವಾಬ್ದಾರಿಯನ್ನು ಹೊಂದಿದ್ದ ಸೇನಾನಿಗಳ ವರ್ಗ
೩. ಕುಶಲ ಕರ್ಮಿಗಳು, ಕೆತ್ತನೆ ಕೆಲಸ ಮಾಡುವವರು, ನೆಯ್ಗೆಯವರು, ವ್ಯಾಪಾರಿಗಳು, ಚಿನ್ನ ಕೆಲಸಕಾರರು ಹಾಗೂ ಕರಕುಶಲ ಕೆಲಸಗಾರರನ್ನು ಒಳಗೊಂಡ ಕೆಲಸಗಾರರ ವರ್ಗ.
೪. ಮೀನುಗಾರರು, ಕೃಷಿಕರು, ಚಮ್ಮಾರರು ಹಾಗೂ ಮೇದರನ್ನು ಒಳಗೊಂಡ ಕಾರ್ಮಿಕ ವರ್ಗ.

ಈ ವಿಂಗಡಣೆಯೇ ತದನಂತರದಲ್ಲಿ ಪರಿಷ್ಕರಣೆಯಾಗಿ ವರ್ಣ ವ್ಯವಸ್ಥೆಯ ವರ್ಣಶ್ರೇಣೀಕರಣಕ್ಕೆ ನಾಂದಿಯಾಯಿತು ಎಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ವೇದ ಪೂರ್ವ ಕಾಲದ ಇತಿಹಾಸದ ಬಗೆಗೆ ಇರುವ ಚಿಂತನೆಗಳನ್ನು ಗಮನಿಸಬೇಕಾದ ಅಗತ್ಯ ಈ ಅಧ್ಯಯನ ಮಟ್ಟಿಗೆ ಆರ್ಯ ಇತಿಹಾಸವನ್ನು ಚರ್ಚಿಸುವ ಸಲುವಾಗಿ, ಅಂದರೆ ವೇದಕಾಲ ಹಾಗೂ ವೇದ ಪೂರ್ವಕಾಲದ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಗಮನಿಸಿದರೆ ಮತಾಂತರಕ್ಕೆ ಸಂಬಂಧಿಸಿದಂತೆ ಮಹತ್ವದ ಅಂಶಗಳನ್ನು ಚರ್ಚಿಸಲು ಸಾಧ್ಯವಿದೆ.

**ಆರ್ಯರ ಮೂಲದ ಬಗೆಗಿನ ಚಿಂತನೆಗಳು**

ಭಾರತೀಯ ಪ್ರಾಚೀನ ಇತಿಹಾಸದಲ್ಲಿ ವೇದಕಾಲ ಹಾಗೂ ವೇದಪೂರ್ವಕಾಲದ ಬಗೆಗೆ ಚರ್ಚಿಸುವಾಗ ಸಂಧಿಗ್ಧವೊಂದು ಎದುರಾಗಿರುತ್ತದೆ. ಅದೇನೆಂದರೆ ಆರ್ಯರ ಮೂಲ ಯಾವುದು ? ಎಂಬುದು. ಆರ್ಯರು ವಿಧೇಶಿಯರು ಎಂದು ಒಂದು ವಾದ ಹೇಳಿದ್ದರೆ. ಆರ್ಯರು ದೇಶೀಯರು ಎಂದು ಇನ್ನೊಂದು ವಾದ ಹೇಳುತ್ತದೆ. ಆದರೆ ಇದುವರೆವಿಗೂ ನಿಖರವಾಗಿ ಆರ್ಯರ ಮೂಲವನ್ನು ಶೋಧಿಸಲು ಸಾಧ್ಯವಾಗಿಲ್ಲ. ಸಿಕ್ಕಿರುವ ಅಲ್ಪ ಪುರಾವೆಗಳ ಮೂಲಕ ಆರ್ಯರ ಮೂಲವನ್ನು ದೇಶೀಯ ಹಾಗೂ ವಿದೇಶೀಯ ಎಂದು ಕಲ್ಪಿಸಿಕೊಳ್ಳಲಾಗಿದೆ. ಈ ವಿಂಗಡಣೆಯಲ್ಲಿ ಬಳಕೆಯಾಗಿರುವ ಸಿದ್ಧಾಂತಗಳು ಎರಡು, ಅವುಗಳೆಂದರೆ

೧. ಭಾಷಾಶಾಸ್ತ್ರ,

೨. ಮಾನವಶಾಸ್ತ್ರ,

ಈ ಸಿದ್ಧಾಂತಗಳನ್ನು ಎರಡೂ ಪಂಗಡದವರು ವೈರುಧ್ಯಾತ್ಮಕವಾಗಿ ಬಳಸಿಕೊಳ್ಳುತ್ತಾರೆ. ಆರ್ಯರು ಭಾರತದಿಂದ ಬೇರೆ-ಬೇರೆ ಕಡೆಗೆ ವಲಸೆ ಹೋಗಿದ್ದಾರೆ ಎಂದು ದೇಶೀ ಮೂಲಕ ಚಿಂತನೆ ವಾದಿಸುತ್ತದೆ.

ಆರ್ಯರ ಮೂಲಸ್ಥಾನದ ಬಗ್ಗೆ ಸಿ.ಎನ್.ಶೆಟ್ಟಿಯವರು "ಸುಮಾರು ಆರೇಳು ಸಾವಿರ ವರ್ಷಗಳ ಹಿಂದೆ ಇಂದಿನ ರಷ್ಯಾ ದೇಶದ ಪಶ್ಚಿಮ ಭಾಗದಲ್ಲಿರುವ ಕಪ್ಪು ಸಮುದ್ರಕ್ಕೆ ಉತ್ತರ ದಿಕ್ಕಿನಿಂದ ಹರಿದು ಬಂದು ಸೇರುವ ನೇಪಿಯರ್ ನದಿ ತೀರದ

ಪೂರ್ವ ಪ್ರದೇಶ ಮತ್ತು ಪೂರ್ವಕ್ಕಿರುವ ಕೇಸ್ಪಿಯನ್ ಸಮುದ್ರಕ್ಕೆ ಉತ್ತರದಿಂದ ಹರಿದುಬಂದು ಸೇರುವ ವೋಲ್ಗಾ ನದೀ ತೀರದ ಪಶ್ಚಿಮ ಮತ್ತು ಪೂರ್ವ ಪ್ರದೇಶ ಇವುಗಳ ಒಟ್ಟು ವಿಶಾಲವಾದ ಭೂಪ್ರದೇಶದಲ್ಲಿ ಅತೀ ಪುರಾತನವಾದ ಒಂದು ಮಾನವ ಬುಡಕಟ್ಟು ಬೇಟೆಯಾಡಿ ಮತ್ತು ಪಶುಪಾಲನೆ ಮಾಡಿ ಜೀವಿಸುತ್ತಿತ್ತು ಎಂದು ತಿಳಿಯಲಾಗಿದೆ. ಮುಂದೆ ಈ ಜನರು ತಮ್ಮನ್ನು ಆರ್ಯರೆಂದು ಕರೆದುಕೊಂಡರು"[೫] ಎಂದು ದಾಖಲಿಸುತ್ತಾರೆ. ಇದೇ ವಾದವನ್ನು ಮ್ಯಾಕ್ಸ್‌ಮುಲ್ಲರನಂತಹ ವಿದ್ವಾಂಸರು "ಮೂಲತಃ ನೊಮ್ಯಾಡಿಕ್ ಕುಲದವರಾದ ಅಂದರೆ, ಸ್ಥಳದಿಂದ ಸ್ಥಳಕ್ಕೆ ವಲಸೆ ಹೋಗುವಂಥ ಜನರಾದ ಇವರು ಸುಮಾರು ಕ್ರಿಸ್ತಪೂರ್ವ ೨೦೦೦ ದಲ್ಲಿ ಮಧ್ಯ ಏಷ್ಯಾದಿಂದ ಹೊರಟು ಅಚಿತಿಮವಾಗಿ ಇರಾಕ್, ಬಲೂಚಿಸ್ಥಾನಗಳ ಮೂಲಕ ಭಾರತವನ್ನು ಪ್ರವೇಶಿಸಿದರು. ಮಧ್ಯ ಏಷ್ಯಾದಿಂದ ಹೊರಟ ಇವರು ಭಾರತಕ್ಕೆ ಮಾತ್ರ ಬರದೆ ಏಷ್ಯಾ ಖಂಡದ ಇತರೆ ಭಾಗಗಳು ಹಾಗೂ ಯೂರೋಪ್ ಖಂಡದ ಹಲವು ಭಾಗಗಳಿಗೆ ವಲಸೆ ಹೋದರು"[೬] ಎನ್ನುತ್ತಾರೆ. ಈ ವಿವರಗಳು ಆರ್ಯರು ವಿದೇಶ ಮೂಲದವರು ಎಂದು ದಾಖಲಿಸುತ್ತದೆ.

ಆರ್ಯರ ವಿದೇಶಿ ಮೂಲವನ್ನು ವಿರೋಧಿಸುವ ವಿದ್ವಾಂಸರು ಇಂಡೋ ಯೂರೋಪಿಯನ್ ಭಾಷಾ ಸಮೂಹದಲ್ಲಿನ ಅತ್ಯಂತ ಪ್ರಾಚೀನ ಸಾಹಿತ್ಯ ಭಾರತದಲ್ಲಿ ದೊರಕುತ್ತದೆ ಎಂಬ ಅಂಶವನ್ನು ಆಧಾರವಾಗಿ ಇಟ್ಟುಕೊಂಡು ಆರ್ಯರು ಮೂಲತಃ ಭಾರತೀಯರು ಎಂದು ಹೇಳುತ್ತಾರೆ. ಇದಕ್ಕೆ ಪುಷ್ಠಿ ನೀಡುವ ಇನ್ನೊಂದು ಉದಾಹರಣೆಯನ್ನು ಈ ವಿದ್ವಾಂಸರು ಹೇಳುತ್ತಾರೆ. ಅದೇನೆಂದರೆ, "ಆರ್ಯರು ಸಪ್ತ ಸಿಂಧೂ ಪ್ರದೇಶದಲ್ಲಿ ವಾಸವಾಗಿದ್ದರಿಂದ ಸಪ್ತಸಿಂಧೂ ಪ್ರದೇಶದಲ್ಲಿದ್ದ ಸಿಂಹ ಹಾಗೂ ಆನೆ ಮತ್ತು ಗೋಧಿಯನ್ನು ವೈದಿಕ ಸಾಹಿತ್ಯದಲ್ಲಿ ಉಲ್ಲೇಖಿಸಿದ್ದಾರೆ. ಒಂದು ವೇಳೆ ಅವರು ಆ ಪ್ರದೇಶದಲ್ಲಿ ವಾಸವಾಗಿರದಿದ್ದರೆ ತಮ್ಮ ಸಾಹಿತ್ಯದಲ್ಲಿ ಪ್ರಾಣಿಗಳ ಹೆಸರನ್ನೇ ಆಗಲಿ ಅಥವಾ ಧಾನ್ಯದ ಹೆಸರನ್ನೇ ಆಗಲಿ ಉಲ್ಲೇಖಿಸುತ್ತಿರಲಿಲ್ಲ. ಹಾಗಾಗಿ ಆರ್ಯರು ದೇಶೀಯರೇ ವಿನಃ ವಿದೇಶಿಯರಲ್ಲ"[೭] ಎಂದು ಹೇಳುತ್ತಾರೆ.

ಆರ್ಯರ ಮೂಲ ಈ ಎರಡರಲ್ಲಿ ಯಾವುದೇ ಇದ್ದರೂ ಇವರು ಮೂಲಭೂತವಾಗಿ ಆಕ್ರಮಣಶೀಲ ಪ್ರವೃತ್ತಿಯುಳ್ಳ ಜನವರ್ಗ ಎಂಬುದನ್ನು ಅರಿಯಬೇಕಾಗುತ್ತದೆ. ಹಾಗೆಯೇ ಇವರು ಭಾರತೀಯ ಚರಿತ್ರೆಯಲ್ಲಿ ಇಂದಿಗೂ ನಿವಾರಿಸಲು ಸಾಧ್ಯವಾಗದಂತಹ ಜಾತಿ ಶ್ರೇಣೀಕರಣಕ್ಕೆ ಅಡಿಪಾಯವನ್ನು ವರ್ಣ

ವ್ಯವಸ್ಥೆಯ ಮೂಲಕ ಹೇರಿದರು ಎಂಬ ವಿಷಯಗಳಲ್ಲಿ ಯಾವುದೇ ವಿರೋಧಗಳಿಲ್ಲ ಎಂಬುದನ್ನು ಗಮನಿಸಬೇಕು. ಇಷ್ಟಾದರೂ ಆರ್ಯರ ಮೂಲದ ಬಗ್ಗೆ ಚಿಂತಿಸಬೇಕಾದ ಅಗತ್ಯ ಯಾಕೆಂದರೆ ಇಂದಿನ ಕೋಮುವಾದ ತಾನು ಮತ್ತು ಅನ್ಯ ಎಂದು ನೋಡುವಾಗಿನ ಸಾಂಸ್ಕೃತಿಕ ಸಮಸ್ಯೆಯ ಕಾರಣಕ್ಕಾಗಿ. ಅಂದರೆ ಹಿಂದೂ ಧರ್ಮದ ಚೌಕಟ್ಟಿನೊಳಗೆ ಬುರವ ಎಲ್ಲರೂ ಭಾರತೀಯರು, ಇದರಾಚೆಗಿನ ಮುಸ್ಲಿಂ, ಕ್ರೈಸ್ತರೆಲ್ಲಾ ವಿದೇಶಿಯರು ಅಥವಾ ವಲಸೆಗಾರರು ಎಂದು ಇದು ತಿಳಿಯುತ್ತದೆ. ಹಾಗೆಯೇ ಇದು ಹಿಂದೂ ಧರ್ಮದ ಇತಿಹಾಸವನ್ನು ಈ ಆರ್ಯರಿಂದಲೇ ಗುರ್ತಿಸಿಕೊಳ್ಳುತ್ತದೆ. ಹಿಂದೂ ಧರ್ಮ ಎಂಬ ಸಾಮುದಾಯಿಕ ಐಡೆಂಟಿಟಿಯನ್ನು ಒತ್ತಿ ಹೇಳುವಾಗ ಈ ಕಮ್ಯುನಲ್ ಐಡಿಯಾಲಜಿಯ ನೆಲೆಗಳು “ತಮ್ಮ ಅದಿಕೃತತೆ ಮತ್ತು ಸಮರ್ಥನೆಗಾಗಿ ಭೂತಕಾಲವನ್ನು ಬಳಸಿಕೊಳ್ಳುತ್ತವೆ. ನಾವು ಈಗ “ಹಿಂದೂಧರ್ಮ” ಎಂದು ಕರೆಯುವ ಧರ್ಮವು ಚಾರಿತ್ರಿಕವಾಗಿ ವಿಕಾಸವಾಗಿದೆ. ಅದಕ್ಕೆ ಸುಸ್ಪಷ್ಟವಾದ ರೂಪು ರೇಷೆಗಳಿವೆ ಹಾಗೂ ಅದು ಎಂದಿನಿಂದಲೂ ಅಸ್ತಿತ್ವದಲ್ಲಿದೆ ಎನ್ನುವುದು ಅವರ ವಾದ”[೮]. ಹೀಗಾಗಿ ಆರ್ಯರ ದೇಶೀ ಮೂಲದ ಚಿಂತನೆ ಸ್ಪಷ್ಟವಾಗಿಲ್ಲದ ಕಾರಣ ಇವರು ಮಧ್ಯ ಏಷ್ಯಾದಿಂದ ಬೇರೆ ಬೇರೆ ಕಡೆಗೆ ವಲಸೆ ಹೋಗಿದ್ದಾರೆ ಎಂಬ ವಾದವನ್ನೇ ಸಧ್ಯಕ್ಕೆ ಇಲ್ಲಿ ಬಳಸಿಕೊಳ್ಳಲಾಗಿದೆ.

ಆರ್ಯರು ಮಧ್ಯಏಷ್ಯಾದಿಂದ ಬಂದು ಸಿಂಧೂ ನಾಗರೀಕತೆಯ ಮೇಲೆ ಆಕ್ರಮಣ ಮಾಡಿ ಇಲ್ಲಿನ ಸಂಸ್ಕೃತಿಯನ್ನು ನಾಶ ಮಾಡಿದರು ಎಂಬ ವಾದದಲ್ಲಿಯೇ ಮತಾಂತರದ ಬೀಜಗಳು ಅಡಗಿವೆ. ಇಂದು ಹಿಂದೂಧರ್ಮೀಯರನ್ನು ಆಮಿಷ ಮತ್ತು ಬಲಾತ್ಕಾರದಿಂದ ಮತಾಂತರ ಮಾಡಲಾಗುತ್ತಿದೆ ಎಂದು ಯಾವುದನ್ನು ಕೋಮುವಾದದ ಚಿಂತನೆ ಹೇಳುತ್ತದೋ, ಅದೇ ಬಗೆಯ ಬಲತ್ಕಾರ ಸಿಂಧೂ ನಾಗರೀಕತೆಯ ಮೇಲೆ ನಡೆದಿದೆ ಎಂಬುದು ಆರ್ಯರ ಆಕ್ರಮಣಶೀಲ ಚರಿತ್ರೆಯನ್ನು ಗ್ರಹಿಸಿದಾಗ ತಿಳಿಯುತ್ತದೆ.

ಹಾಗಾದರೆ ಮತಾಂತರ ಎಂದರೇನು ? ಎಂಬ ಪ್ರಶ್ನೆಯನ್ನು ವಿವರಿಸಿ ಕೊಳ್ಳುವುದು ಸೂಕ್ತವೆನಿಸುತ್ತದೆ. ಏಕೆಂದರೆ ಮತಾಂತರಕ್ಕಿರುವ ಚರಿತ್ರೆಯನ್ನು ಗುರುತಿಸಲು ಇದು ಸಹಕಾರಿಯೆನಿಸುತ್ತದೆ. ಮತಾಂತರವು ಒಂದು ಸಮುದಾಯ ತನ್ನ ಸಾಂಪ್ರದಾಯಿಕ ಆಚರಣೆಗಳನ್ನು ಹಾಗೂ ನಂಬಿಕೆಗಳನ್ನು ಬದಲಿಸುವುದಕ್ಕೆ ಸಂಬಂಧಿಸಿದ್ದು, ಅಂದರೆ ತಾನು ಅದುವರೆವಿಗೂ ನಂಬಿಕೊಂಡು ಬಂದಿದ್ದ ದೈವಿಕ

ನಂಬಿಕೆಗಳು ತಾನು ನಂಬಿದ ದೈವಕ್ಕೆ ವಿಧಿಬದ್ಧವಾಗಿ ಮಾಡುತ್ತಿದ್ದ ಆಚರಣೆಗಳೆಲ್ಲವನ್ನು ನಿರಾಕರಿಸಿ ಹೊಸ ನಂಬಿಕೆ, ಆಚರಣೆಗಳ ಮೊರೆ ಹೋಗುವುದನ್ನು ಮತಾಂತರ ಎಂದು ಕರೆಯಬಹುದು. ಇದೇ ವ್ಯಾಖ್ಯಾನದ ಪರಿಧಿಯಲ್ಲಿ ಇಂದಿನ ಮತಾಂತರದ ವಾಗ್ವಾದಗಳು ನಡೆಯುತ್ತಿವೆ. ಹಾಗಾಗಿ ಆರ್ಯರು ಸಿಂಧೂ ನಾಗರೀಕತೆಯ ಜನವರ್ಗಗಳನ್ನು ಅವರ ಮೂಲ ನಂಬಿಕೆ, ಧರ್ಮಾಚರಣೆಗಳಿಂದ ಬದಲಾಯಿಸಿ ಹೊಸ ಆಚರಣೆಗಳಿಗೆ ಒಗ್ಗಿಸಿದನ್ನು, ಮತಾಂತರ ಎಂದು ತಿಳಿಯಬೇಕಾಗುತ್ತದೆ. ಆದ್ದರಿಂದ ಮತಾಂತರದ ಇತಿಹಾಸವನ್ನು ಹುಡುಕುತ್ತಾ ಹೋದರೆ ಭಾರತೀಯ ಚರಿತ್ರೆಯ ಆರಂಭವೇ ಮತಾಂತರದಿಂದ ಆರಂಭವಾಗುತ್ತದೆ. ವೈದಿಕ ಧರ್ಮದ ಆರಂಭವೇ ಮತಾಂತರದ ಚರಿತ್ರೆಯನ್ನು ಒಳಗೊಂಡಿರುವಂತಹದ್ದು ಇಲ್ಲಿಂದಾಚೆಗೆ ಮತಾಂತರಕ್ಕೆ ಬೇರೆ ಆಯಾಮಗಳು ಸೃಷ್ಟಿಯಾಗುತ್ತವೆ. ಆರ್ಯರು ಇಲ್ಲಿನ ಜನವರ್ಗಗಳನ್ನು ಹೊಸ ಧಾರ್ಮಿಕ ವ್ಯವಸ್ಥೆಗೆ ಒಗ್ಗಿಸುವಾಗ ಹಾಗೂ ಅನಂತರದಲ್ಲಿ ಹಿಂಸಾತ್ಮಕ ಸಮಾಜದ ಸೃಷ್ಟಿಗೆ ಕಾರಣರಾದರು, ಅಲ್ಲದೆ ವರ್ಗವ್ಯವಸ್ಥೆಯನ್ನು ಜಾರಿಗೆ ತರುವುದರ ಮೂಲಕ ಸಮಾಜದಲ್ಲಿ ಅಸಮಾನತೆಯನ್ನು ಸೃಷ್ಟಿಸಿದರು. ಈ ಹಿಂಸಾತ್ಮಕವಾದ ಹಾಗೂ ಅಸಮಾನತೆಯಿಂದ ಕೂಡಿದ್ದ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸಿದ ಅನೇಕ ಗುಂಪುಗಳು ಹೊಸ ಧಮಗಳ ಉದಯಕ್ಕೆ ನಾಂದಿ ಹಾಡಿದವು. ಈ ಹೊಸ ಧರ್ಮಗಳು ಆರ್ಯ ಪೂರ್ವದಲ್ಲಿ ಆಚರಣೆಯಲ್ಲಿದ್ದ ಧಾರ್ಮಿಕ ತತ್ವಗಳ ಮುಂದುವರಿಕೆಯಾಗಿ ಹಾಗೂ ಕೆಲವು ಹೊಸ ಬದಲಾವಣೆಗಳೊಂದಿಗೆ ರೂಪುಗೊಂಡವು. ಆರ್ಯರ ಆಕ್ರಮಣದಿಂದ ಇಲ್ಲಿನ ಎಲ್ಲ ಜನವರ್ಗಗಳು ಮತಾಂತರವಾಗದೆ ವೈಧಿಕ ಧರ್ಮಕ್ಕೆ ಪ್ರತಿಭಟನಾ ಸ್ವರೂಪದಲ್ಲಿ ಲೋಕಾಯತರು, ಶಾಕ್ತ ಪಂಥಗಳು ಹಾಗೂ ಶೈವ ಪಂಥಗಳು ತಮ್ಮ ಆದಿ ಚಿಂತನೆಗಳನ್ನು ಮುಂದುವರೆಸುತ್ತಲೇ ಬಂದವು. ಈ ಚಿಂತನೆಗಳೇ ಮುಂದೆ ಹೊಸ ಧರ್ಮಗಳ ಉದಯಕ್ಕೂ ಕಾರಣವಾದವು. ವೈದಿಕ ಧರ್ಮಕ್ಕೆ ವಿರುದ್ಧ ಆಶಯಗಳಲ್ಲಿ ಹುಟ್ಟಿದ ಹೊಸ ಧರ್ಮಗಳೆಂದರೆ ಬೌದ್ಧ, ಜೈನ, ಶೈವ, ವೈಷ್ಣವ ಧರ್ಮಗಳು ಇವು ಬೋಧಿಸಿದ ತತ್ವಗಳಿಂದ ಸಮುದಾಯಗಳು ವೈದಿಕ ಧರ್ಮವನ್ನು ವಿರೋಧಿಸಿ ಈ ಹೊಸ ಧರ್ಮಗಳಿಗೆ ಮತಾಂತರವಾಗುತ್ತಾ ಬಂದವು.

ಭಾರತೀಯ ಚರಿತ್ರೆಯಲ್ಲಿ ವೈದಿಕ ಧರ್ಮವನ್ನು ವಿರೋಧಿಸಿ ನಡೆದ ಮತಾಂತರ ಪ್ರಕ್ರಿಯೆಗಳನ್ನು ಎರಡು ವಿಭಾಗಗಳಾಗಿ ವಿಂಗಡಿಸಬಹುದು, ಅವುಗಳೆಂದರೆ,

೧. ಭಾರತದಲ್ಲಿ ಹೊಸದಾಗಿ ಹುಟ್ಟಿದ ಧರ್ಮಗಳಿಂದಾದ ಮತಾಂತರ.

೨. ಭಾರತಕ್ಕೆ ಬಂದ ವಿದೇಶಿಯ ಅನ್ಯಧರ್ಮಿಯರಿಂದಾದ ಮತಾಂತರ.

ವೈದಿಕಧರ್ಮ ಆಚರಣೆಯಲ್ಲಿಟ್ಟಿದ್ದ ಮೇಲು-ಕೀಳಿನ ಕಲ್ಪನೆಯು ಜಾತಿಯ ಸ್ವರೂಪದಲ್ಲಿ ಜಾರಿಯಲ್ಲಿತ್ತು. ಇದು ಸೃಷ್ಟಿಸಿದ್ದ ಶೋಷಣಾಜಗತ್ತು ಜನಸಮುದಾಯಗಳನ್ನು ಎಲ್ಲ ಕ್ಷೇತ್ರಗಳಲ್ಲಿ ಹೊರಗಿಟ್ಟಿತ್ತು. ಹಾಗೂ ಹಲವು ಜನಸಮುದಾಯಗಳನ್ನು ತನ್ನ ಧರ್ಮದ ಪರಿಧಿಯಿಂದಲೂ ಹೊರಗಿಟ್ಟಿತ್ತು. ಅಲ್ಲದೆ ಇದು ಆಧ್ಯಾತ್ಮ ಕೇಂದ್ರವಾದ ಧರ್ಮವಾಗಿ ರೂಪುಗೊಂಡು ಜನವರ್ಗಗಳನ್ನು ಶೋಷಿಸಲು ಇದನ್ನೇ ಒಂದು ಅಸ್ತ್ರವನ್ನಾಗಿ ಬಳಸಿತು. ವೈದಿಕ ಧರ್ಮವು ಜಾತಿಯಾಧಾರಿತವಾಗಿ, ಅಸಮಾನತೆಯಿಂದ ಹಾಗೂ ಪರಸ್ಪರ ಜನರನ್ನು ವಂಚಿಸುವ ತಂತ್ರಗಳಿಂದ ರೂಪುಗೊಂಡಿದ್ದನ್ನು ವಿರೋಧಿಸಿ ಹಲವು ಹೊಸ ಧರ್ಮಗಳು ರೂಪುಗೊಂಡವು. ಅವುಗಳಲ್ಲಿ ಮತಾಂತರ ಚರ್ಚೆಗೆ ಸಂಬಂಧಿಸಿದಂತೆ ಬೌದ್ಧಧರ್ಮ, ಜೈನಧರ್ಮ ಹಾಗೂ ವೀರಶೈವ ಧರ್ಮಗಳನ್ನು ಪ್ರಮುಖವಾಗಿ ಗುರ್ತಿಸಬಹುದಾಗಿದೆ.

ವೈದಕ ಧರ್ಮವು ಮೂಲತಃ ಆಧ್ಯಾತ್ಮ ಕೇಂದ್ರಿತವಾದದ್ದು. ಈ ತತ್ವವೇ ಇಲ್ಲಿನ ಅವೈದಿಕರನ್ನು ಶೋಷಿಸುವ ಕೇಂದ್ರವಾಗಿತ್ತು. ಇದನ್ನು ವಿರೋಧಿಸಿ ಭಾರತದಲ್ಲಿ ಅನೇಕ ಭೌತವಾದಿ ಮತಪಂಥಗಳು ಹುಟ್ಟಿದವು. ಅವುಗಳಲ್ಲಿ ಬೌದ್ಧ ಮತ್ತು ಜೈನ ಮತಗಳನ್ನು ಪ್ರಥಮವಾಗಿ ಗುರುತಿಸಬಹುದು. ಕ್ರಿ.ಪೂ. ಆರನೆಯ ಶತಮಾನದಲ್ಲಿ ವೈದಿಕ ಧರ್ಮಕ್ಕೆ ಪ್ರತಿರೋಧವಾಗಿ ಬೌದ್ಧ ಮತ್ತು ಜೈನ ಧರ್ಮಗಳು ಹುಟ್ಟಿದವೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಇವು ವೈದಿಕ ಧರ್ಮ ಬೋಧಿಸುತ್ತಿದ್ದ ಆತ್ಮದ ಅಸ್ತಿತ್ವವನ್ನು ನಿರಾಕರಿಸಿ 'ಅನಾತ್ಮ' ದ ಸಿದ್ಧಾಂತವನ್ನು ಮಂಡಿಸಿದರು. ಈ ಮೂಲಕ ವೈದಿಕ ಧರ್ಮದೊಳಗಿದ್ದ ಅಸಮಾನತೆಯ ತತ್ವಗಳನ್ನು ನಿರಾಕರಿಸಿ ಸಾಮಾಜಿಕ ಸಮಾನತೆಯನ್ನು ಬೋಧಿಸಿದವು. ಹೀಗೆ ಮಾಡುತ್ತಾ ಧರ್ಮಕ್ಕಿದ್ದ ವ್ಯಾಖ್ಯಾನವನ್ನೇ ಮುರಿದುಕಟ್ಟಿದವು. ಬುದ್ಧಧರ್ಮದ ಮಹತ್ವ ದೇವರೊಂದಿಗೆ ಮನುಷ್ಯರು ಹೊಂದಿರುವ ಸಂಬಂಧದಲ್ಲಿ ಇಲ್ಲ. ಅದು ಮನುಷ್ಯರ ಜೊತೆ ಹೊಂದಿರುವ ಸಂಬಂಧದಲ್ಲಿದೆ. ಎಲ್ಲರೂ ಸುಖವಾಗಿರುವಂತೆ ಮನುಷ್ಯರು ಬೇರೆ ಮನುಷ್ಯರೊಂದಿಗೆ ಹೇಗೆ ವರ್ತಿಸಬೇಕು ಎಂಬುದನ್ನು ಅವರಿಗೆ ಬೋಧಿಸುವುದೇ ಧರ್ಮದ ಧ್ಯೇಯವಾಗಿದೆ" ಎಂದು ಹೇಳಿದ ಧರ್ಮವು ಮನುಷ್ಯರ ನಡುವಿನ ಒಳ್ಳೆಯ ಸಂಬಂಧದ ಆಧಾರದ ಮೇಲೆ ನಿಂತಿರುತ್ತದೆ ಎಂದು ಹೇಳಿದ ಬುದ್ಧ ಅಹಿಂಸೆ, ಸಮಾನತೆ ಹಾಗೂ ಪ್ರಜ್ಞಾವಂತಿಕೆಗಳನ್ನು ಸಮಾಜದಲ್ಲಿ ನೆಲೆಗೊಳಿಸಲು ಪ್ರಯತ್ನಿಸಿದ.

ಇದೇ ತತ್ವಗಳನ್ನು ಜೈನಧರ್ಮವೂ ಬೋಧಿಸಿತು. ಈ ಎರಡು ಧರ್ಮಗಳ ನಡುವಿನ ವ್ಯತ್ಯಾಸವೆಂದರೆ, ಇವೆರಡೂ ಧರ್ಮಗಳು ಹೊಂದಿರುವ ಗುರಿಯೊಂದೆ. ಆದರೆ ಆ ಗುರಿಯನ್ನು ಮುಟ್ಟಲು ಹೊರಡುವ ಮಾರ್ಗಗಳು ಬೇರೆ ಬೇರೆಯವು.

ವೈದಿಕ ಧರ್ಮದೊಳಗಿನ ಹಿಂಸಾತ್ಮಕ ವ್ಯವಸ್ಥೆಯನ್ನು ವಿರೋಧಿಸಿ ಹುಟ್ಟಿದ ಬೌದ್ಧ ಮತ್ತು ಜೈನಧರ್ಮಗಳಿಗೆ ಶೋಷಿತ ಜನವರ್ಗಗಳು ಆಕರ್ಷಿತವಾದವು. ಇಂತಹ ಶೋಷಿತ ಜನವರ್ಗ ವೈದಿಕಧರ್ಮವನ್ನು ತ್ಯಜಿಸಿ ಈ ಧರ್ಮಗಳಿಗೆ ಮತಾಂತರವಾದರು. ಆರ್ಯರ ಆಕ್ರಮಣಕ್ಕೆ ತುತ್ತಾಗಿ ಒತ್ತಾಯಪೂರ್ವಕವಾಗಿ ಮತಾಂತರವಾದ ಪ್ರಕ್ರಿಯೆಗಳಿಗಿಂತ ಈ ಹೊಸ ಧರ್ಮಗಳ ಮೂಲಕ ಮತಾಂತರಕ್ಕೆ ಭಿನ್ನ ಆಯಾಮಗಳು ತೆರೆದುಕೊಳ್ಳುತ್ತವೆ. ಆರ್ಯರ ಹಿಂಸಾತ್ಮಕ ವ್ಯವಸ್ಥೆಗೆ ಪ್ರತಿರೋಧವಾಗಿ ಹೊಸಧರ್ಮಗಳಿಗೆ ಮತಾಂತರವಾಗುವ ಚರಿತ್ರೆ ಭಾರತದಲ್ಲಿ ಈ ಧರ್ಮಗಳ ಮೂಲಕ ರೂಪುಗೊಳ್ಳುತ್ತದೆ. ಜಾಗತಿಕವಾಗಿಯೂ ಮತಾಂತರವೆಂಬುದು ಅಲ್ಲಿನ ಹಿಂಸಾತ್ಮಕ ವ್ಯವಸ್ಥೆಯ ವಿರುದ್ಧ ತೋರಿದ ಪ್ರತಿಕ್ರಿಯೆಯೇ ಆಗಿದೆ.

ಬೌದ್ಧ ಮತ್ತು ಜೈನ ಧರ್ಮಗಳಂತೆಯೇ ವೈದಿಕ ಧರ್ಮದ ಶೋಷಣಾ ವ್ಯವಸ್ಥೆಯನ್ನು ವಿರೋಧಿಸಿ ಶೈವ ಪಂಥ ರೂಪುಗೊಂಡಿತು. ಈ ಪಂಥದ ಮುಖ್ಯ ಆಕರವಾಗಿ ಕನ್ನಡದ ವಚನ ಚಳುವಳಿಯ ಕಾಲಘಟ್ಟದಲ್ಲಿ ರೂಪುಗೊಂಡ ವೀರಶೈವ ಧರ್ಮವನ್ನು ಗಮನಿಸಬಹುದು. ವಚನಕಾರರು ಕೈಗೊಂಡ ಜಾತಿವಿನಾಸ ಕಾರ್ಯಕ್ರಮವು ವೈದಿಕಧರ್ಮದ ಅಡಿಪಾಯವನ್ನೇ ಅಲುಗಾಡಿಸುವ ಕಾರ್ಯ. ಬಸವಣ್ಣ ಹಿಂದೂ ಧರ್ಮದೊಳಗಿದ್ದ ಆಚರಣೆಗಳಿಗೆ ಪರ್ಯಾಯವಾದ ಹೊಸ ಆಚರಣೆಗಳನ್ನು ಹುಟ್ಟುಹಾಕಿ ಇಲ್ಲಿನ ಕುಶಲಕರ್ಮಿ ಸಮುದಾಯಗಳಿಗೆ ಹೊಸ ಧಾರ್ಮಿಕ ತತ್ವಗಳನ್ನು ಬೋಧಿಸಿದರು. ಈ ತತ್ವಗಳಿಂದ ಸ್ಫೂರ್ತಿಗೊಂಡ ಶೋಷಿತ ಜನವರ್ಗಗಳು ಹಾಗೂ ಹಿಂದೂ ಧರ್ಮದ ಹಿಂಸಾತ್ಮಕ ವ್ಯವಸ್ಥೆಯಿಂದ ಬೇಸತ್ತಿದ್ದ ಸಮುದಾಯಗಳು ಬಸವಣ್ಣನವರ ಹೊಸ ಧರ್ಮಕ್ಕೆ ಮತಾಂತರಗೊಂಡರು. ಮುಂದೆ ೧೫-೧೬ನೇ ಶತಮಾನಗಳ ಹೊತ್ತಿಗೆ ವೀರಶೈವಧರ್ಮ ಸಾಂಸ್ಥಿಕಗೊಂಡ ಸಂದರ್ಭದಲ್ಲಿ ಇದನ್ನು ವಿರೋಧಿಸಿ ಹುಟ್ಟಿದ ಮಂಟೇಸ್ವಾಮಿ, ಕೋಡೇಕಲ್ ಬಸವಣ್ಣ, ಮಾದೇಶ್ವರ ಮುಂತಾದ ಸಿದ್ಧ ಪರಂಪರೆಗಳೊಳಗೂ ಮತಾಂತರ ಪ್ರಕ್ರಿಯೆ ನಡೆದಿರಬಹುದಾದ ಜನಪದ ಮಹಾಕಾವ್ಯಗಳೊಳಗಿನ ವಿವರಣೆಗಳಲ್ಲಿ ಕಾಣಬಹುದು. ಮಂಟೇಸ್ವಾಮಿ ಹಾಗೂ ಮಾದೇಶ್ವರರು ಅನೇಕ ಸಮುದಾಯಗಳನ್ನು ಒಕ್ಕಲು

ಮಾಡಿಕೊಳ್ಳುತ್ತಾರೆ. ಕುಲಗಳನ್ನು ಒಂದು ಮಾಡುವ ಪ್ರಯತ್ನದಲ್ಲಿ ತೊಡಗುತ್ತಾರೆ. ಈ ಒಕ್ಕಲು ಮಾಡಿಕೊಳ್ಳುವ ಪ್ರಕ್ರಿಯೆ ಮತಾಂತರಕ್ಕೆ ಸಂಬಂಧಿಸಿದ್ದು, ಇವು ಪ್ರಾಚೀನ ಕಾಲದಿಂದಲೂ ಬೆಳೆದು ಬಂದಿರುವ ಶೈವಧಾರೆಗಳೊಳಗೆ ಬರುವಂತಹವು ಎಂಬುದು ಮುಖ್ಯವಾದದ್ದು.

ವೈದಿಕ ಧರ್ಮ ಅಥವಾ ಆರ್ಯರ ಧಮನಕಾರಿ ವ್ಯವಸ್ಥೆಗೆ ಪ್ರತಿರೋಧವಾಗಿ ಹುಟ್ಟಿದ ಭೌತವಾದಿ ಧಾರ್ಮಿಕ ಚಿಂತನೆಗಳು ಇಂದಿಗೂ ಮುಂದುವರಿದುಕೊಂಡು ಬರುತ್ತಿರುವುದನ್ನು ಗಮನಿಸಬಹುದು. ಚಾರಿತ್ರಿಕವಾಗಿ ವೈಧಿಕಧರ್ಮವನ್ನು ವಿರೋಧಿಸಿ ಹುಟ್ಟಿದ ಹೊಸ ಧರ್ಮಗಳೊಳಗಿನ ಮತಾಂತರ ಪ್ರಕ್ರಿಯೆಗಳು ಜಾತಿ ವ್ಯವಸ್ಥೆಯ ವಿರುದ್ಧದ ಬಂಡಾಯಗಳು ಎಂಬುದನ್ನು ಗಮನಿಸಬಹುದು.

ಭಾರತದ ಚರಿತ್ರೆಯಲ್ಲಿ ಮೊದಲ ಮತಾಂತರ ಪ್ರಕ್ರಿಯೆಗಳು ಜಾತಿ ವ್ಯವಸ್ಥೆಯ ವಿರುದ್ಧದ ಬಂಡಾಯಗಳಾಗಿ ರೂಪುಗೊಂಡರೆ, ಇದಕ್ಕಿಂತ ಭಿನ್ನವಾದ ಚರಿತ್ರೆ ಮುಸ್ಲಿಮರ ಆಕ್ರಮಣ ಹಾಗೂ ವಸಾಹತುಶಾಹಿ ಕಾಲಘಟ್ಟಗಳಲ್ಲಿ ಕಾಣುತ್ತದೆ. ಬೌದ್ಧ, ಜೈನ, ವೀರಶೈವ ಮುಂತಾದ ಮತ ಪಂಥಗಳು ಈ ನೆಲದಲ್ಲಿಯೇ ಹುಟ್ಟಿದವುಗಳು. ಈ ಧರ್ಮಗಳಿಗೆ ವೈದಿಕ ಧರ್ಮದ ಕ್ರೂರಿ ಸಮಾಜೋ ಧಾರ್ಮಿಕ ಆಚರಣೆಗಳ ಅನುಭವವಿತ್ತು. ಆದರೆ ಮಧ್ಯಕಾಲೀನ ಯುಗದಲ್ಲಿ ಭಾರತದ ಮೇಲೆ ಆಕ್ರಮಣ ಮಾಡಿದ ಮುಸ್ಲಿಮರಿಗಾಗಲಿ, ವಸಾಹತುಶಾಹಿಗಳಿಗಾಗಲೀ ಈ ಅನುಭವಗಳಿರಲಿಲ್ಲ. ಈ ಧರ್ಮಗಳು ಭಾರತೀಯ ಧಾರ್ಮಿಕ ವ್ಯವಸ್ಥೆಯನ್ನು ಹೊರಗಿನಿಂದ ನೋಡಿ ವಿಶ್ಲೇಷಿಸಲು ತೊಡಗಿದಂತಹವು. ಮಧ್ಯಕಾಲೀನ ಸಂದರ್ಭದಲ್ಲಿ ಬಂದ ಮುಸ್ಲಿಮರು ಸಾಮ್ರಾಜ್ಯ ವಿಸ್ತರಣೆಗಾಗಿ ಹಾಗೂ ವಸಾಹತುಶಾಹಿಗಳು ವ್ಯಾಪಾರಕ್ಕೆಂದು ಭಾರತಕ್ಕೆ ಬಂದವರು. ಇವರಿಗೆ ಆರಂಭದಲ್ಲಿ ತಮ್ಮ ಧರ್ಮ ಸಂಸ್ಕೃತಿಗಳನ್ನು ಇಲ್ಲಿ ಸ್ಥಾಪಿಸುವ ಯಾವ ಉದ್ದೇಶವೂ ಇರಲಿಲ್ಲ. ಇಲ್ಲಿನ ವ್ಯವಸ್ಥೆಯ ಲಾಭ ಪಡೆದು ಮತಪ್ರಚಾರ ಹಾಗೂ ಸಂಸ್ಕೃತಿಗಳನ್ನು ಸ್ಥಾಪಿಸುವ ಕಾರ್ಯ ಆರಂಭವಾಗಿದ್ದು, ಇವರು ಇಲ್ಲಿಗೆ ಬಂದ ಎಷ್ಟೋ ಕಾಲದ ನಂತರದಲ್ಲಿ, ಅದರಲ್ಲಿಯೂ ಇಲ್ಲಿನ ರಾಜಕೀಯ ಆಡಳಿತ ಇವರಿಗೆ ದೊರಕಿದ ನಂತರದಲ್ಲಿ ಇವರು ಮತಾಂತರದ ಪ್ರಕ್ರಿಯೆಯಲ್ಲಿ ತೊಡಗಿದರು.

ಮೊಘಲರು ಹಾಗೂ ವಸಾಹತುಶಾಹಿಗಳ ಕಾಲದಲ್ಲಿಯೂ ಮತಾಂತರಕ್ಕೆ ಕಾರಣವಾಗಿದ್ದು ಇಲ್ಲಿನ ಜಾತಿ ವ್ಯವಸ್ಥೆ ಹಾಗೂ ಮೌಢ್ಯಾಚರಣೆಗಳು ಮತ್ತು ಇವರಿಗೆ

ಇದರೊಂದಿಗೆ ತಮ್ಮ ಧರ್ಮಗಳ ಬಗೆಗಿದ್ದ ಶ್ರೇಷ್ಟತೆಯ ಮನೋಭಾವ ಈ ಸಂದರ್ಭದಲ್ಲಿನ ಮತಾಂತರಕ್ಕೆ ಎರಡು ಕಾರಣಗಳನ್ನು ಊಹಿಸಬಹುದಾಗಿದೆ. ಅವುಗಳೆಂದರೆ

೧. ಧರ್ಮದ ವಿಸ್ತರಣೆಯ ಕಾರ್ಯ

೨. ರಾಜಕೀಯ ಸ್ಥಿರತೆ

ಜಗತ್ತಿನಾದ್ಯಂತ ತಮ್ಮ ಧರ್ಮವನ್ನು ಹರಡಬೇಕೆಂಬ ಮನೋಭಾವ ಮುಸ್ಲಿಮರು ಹಾಗೂ ಕ್ರೈಸ್ತರಲ್ಲಿ ಚರಿತ್ರೆಯುದ್ದಕ್ಕೂ ಬೆಳೆದುಕೊಂಡು ಬಂದಿರುವುದನ್ನು ಕಾಣಬಹುದು. ಈ ಮನೋಭಾವವೇ ಅವರು ಹೋದಲ್ಲೆಲ್ಲಾ ಅಲ್ಲಿನ ಜನವರ್ಗಗಳನ್ನು ತಮ್ಮ ಧರ್ಮಕ್ಕೆ ಪರಿವರ್ತಿಸುವಂತೆ ಪ್ರೇರೇಪಿಸಿದೆ. ಈ ಕಾರ್ಯ ಇಂದು ಜಾಗತಿಕ ಮಟ್ಟದಲ್ಲಿ ಪೈಪೋಟಿಯ ರೂಪದಲ್ಲಿ ನಡೆಯುತ್ತಿರುವುದನ್ನು ಕಾಣಬಹುದು. ಈ ಮನೋಭಾವದ ಪರಿಣಾಮವೇ ಮತಾಂಧ, ಮೂಲಭೂತವಾದ ಹಾಗೂ ಕೋಮುವಾದಗಳಿಗೆ ಕಾರಣವಾಗುತ್ತಿರುವುದಾಗಿದೆ.

ಮೊಘಲರು ಹಾಗೂ ವಸಾಹತುಶಾಹಿಗಳು ರಾಜಕೀಯವಾಗಿ ಭಾರತವನ್ನು ಸುಮಾರು ಎಂಟು ಶತಮಾನಗಳ ಕಾಲ ಆಳಿದ್ದಾರೆ. ಕ್ರಿ.ಶ. ಹದಿಮೂರನೇ ಶತಮಾನದಿಂದ ಇಪ್ಪತ್ತನೇ ಶತಮಾನದವರೆಗೂ ಈ ದೇಶದ ರಾಜಕೀಯ ಅಧಿಕಾರ ಇವರಿಬ್ಬರ ಕೈಯಲ್ಲಿತ್ತು. ಇಲ್ಲಿಗೆ ಬೇರೆ–ಬೇರೆ ಉದ್ದೇಶಗಳಿಗೆ ಬಂದ ಇವರು ಇಲ್ಲಿನ ಪರಿಸ್ಥಿತಿಯ ಲಾಭ ಪಡೆದು ರಾಜಕೀಯ ಅಧಿಕಾರವನ್ನು ಪಡೆದುಕೊಂಡರು. ಅನಂತರದಲ್ಲಿ ಆ ಅಧಿಕಾರವನ್ನು ಉಳಿಸಿಕೊಳ್ಳಲು ಮತಾಂತರ ಪ್ರಕ್ರಿಯೆಯಲ್ಲಿ ತೊಡಗಿದರು. ಈ ಸಂದರ್ಭದಲ್ಲಿ ಅನೇಕ 'ಆಮಿಷ' ಗಳು ಹಾಗೂ ಬಲತ್ಕಾರಗಳ ಮೂಲಕವೂ ಮತಾಂತರ ಮಾಡಲಾಗುತ್ತಿತ್ತು. ಮತಾಂತರದ ಚರ್ಚೆಯಲ್ಲಿ ವಿವಾದಕ್ಕೀಡಾಗಿರುವ ಅಂಶಗಳೇ 'ಆಮಿಶ' ಹಾಗೂ 'ಬಲತ್ಕಾರ'ಗಳೆಂಬ ಪರಿಕಲ್ಪನೆಗಳು, ಚರಿತ್ರೆಯುದ್ದಕ್ಕೂ ನಡೆದಿರುವ ಮತಾಂತರ ಪ್ರಕ್ರಿಯೆಗಳಲ್ಲಿ ಇಲ್ಲಿನ ಕೆಳಜಾತಿಗಳೇ ಅಥವಾ ಶೋಷಿತ ಜಾತಿಗಳೇ ಪಾಲ್ಗೊಂಡಿವೆ ಎಂಬ ಚರ್ಚೆಗಳು ವರ್ತಮಾನದ ಮತಾಂತರದ ಚರ್ಚೆಯಲ್ಲಿ ಕಾಣಬರುತ್ತವೆ. ಆದರೆ ಇಲ್ಲಿನ ಮೇಲ್ಜಾತಿಗಳು ಬೇರೆ ಧರ್ಮಗಳಿಗೆ ಮತಾಂತರಗೊಂಡಿರುವುದನ್ನು ಕಾಣಬಹುದು. ಇದನ್ನು ಕುರಿತು ಎಸ್.ಆರ್.ಭಟ್ ದಾಖಲಿಸುವ ಅಂಶಗಳು ಕುತೂಹಲಕಾರಿಯಾದವು ಗಳಾಗಿವೆ. ಅವರು ಇಲ್ಲಿನ ಮೇಲ್ಜಾತಿಗಳು ಬೇರೆ ಧರ್ಮಗಳಿಗೆ ಮತಾಂತರ ಹೊಂದಿರುವ ಸಂದರ್ಭಗಳನ್ನು ಹೇಳುತ್ತಾ, "ಬೀರಾರ್ ನ ಇಮಾದ್‌ಶಾಹಿ ಮತ್ತು

ಅಹಮದ್‌ನಗರದ ನಿಜಾಮ್‌ಶಾಹಿ ಸುಲ್ತಾನರಲ್ಲಿ ಬ್ರಾಹ್ಮಣರ ರಕ್ತವಿತ್ತು. ಇವರ ಪೂರ್ವಜರು, ಅಂದರೆ ಬೀರಾರ್ ರಾಜ್ಯದ ಸ್ಥಾಪಕನಾಗಿದ್ದ ಫಾತುಲ್ಲಾ ಇಮಾದ್-ಉಲ್-ಮುಲ್ಕ್ ಹಾಗೂ ಅಹಮದ್ ನಗರದ ಪ್ರಥಮ ಸುಲ್ತಾನನ ತಂದೆಯಾಗಿದ್ದ ಮಾಲಿಕ್ ಹಸನ್ ಎಂಬುವವರು ಇಸ್ಲಾಂ ಧರ್ಮವನ್ನು ಸ್ವೀಕರಿಸಿದ ಬ್ರಾಹ್ಮಣರಾಗಿದ್ದರು[೧೦]" ಎಂದು ಹೇಳುತ್ತಾರೆ. ಅದೇ ರೀತಿ ವಸಾಹತುಶಾಹಿಗಳ ಆಳ್ವಿಕೆಯ ಸಂದರ್ಭದಲ್ಲಿ ಕ್ರಿಶ್ಚಿಯಾನಿಟಿಗೆ ಮೊದಲು ಮತಾಂತರಗೊಂಡವರಲ್ಲಿ ಹೆಚ್ಚಿನವರು ಬ್ರಾಹ್ಮಣರಾಗಿದ್ದಾರೆ ಎಂದು ಹಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಇದು ಮಧ್ಯಕಾಲೀನ ಇತಿಹಾಸದಿಂದೀಚೆಗಾದರೆ, ಭಾರತದಲ್ಲಿಯೇ ವೈದಿಕ ಧರ್ಮಕ್ಕೆ ಪ್ರತಿರೋಧವಾಗಿ ಹುಟಿದ ಬೌದ್ಧ, ಜೈನ, ಧರ್ಮಗಳಿಗೆ ಇಲ್ಲಿನ ಮೇಲ್ಜಾತಿಗಳು ಮತಾಂತರಗೊಂಡಿದ್ದಾರೆ ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಇದಕ್ಕೆ ಆದಿಕವಿ ಪಂಪನ ಉದಾಹರಣೆಯನ್ನು ನೋಡಬಹುದಾಗಿದೆ.

ಇಲ್ಲಿ ಭಿನ್ನ ಜಾತಿಗಳು ಬೇರೆ ಬೇರೆ ಕಾರಣಗಳಿಗಾಗಿ ಮತಾಂತರಗೊಂಡಿರುವುದನ್ನು ಕಾಣುತ್ತೇವೆ. ಇಲ್ಲಿನ ಕೆಳಜಾತಿಗಳು ಸಮಾನತೆ, ಸ್ವಾತಂತ್ರ್ಯಕ್ಕಾಗಿ ಹಾಗೂ ಜಾತಿ ವ್ಯವಸ್ಥೆಯ ದೌರ್ಜನ್ಯಗಳಿಂದ ಬಿಡುಗಡೆಗೊಂಡು ಒಂದು ಹೊಸ ಐಡೆಂಟಿಂಟಿಗಾಗಿ ಮತಾಂತರವಾಗುತ್ತವೆ. ಇಲ್ಲಿನ ಮೇಲ್ಜಾತಿಗಳು ಆರ್ಥಿಕ-ರಾಜಕೀಯ ಲಾಭಗಳಿಗಾಗಿ ಮತಾಂತರದಲ್ಲಿ ಪಾಲ್ಗೊಂಡಿವೆ ಎನ್ನಬಹುದು. ಕೆಲವು ಸಂದರ್ಭಗಳಲ್ಲಿ ವೈದಿಕ ಧರ್ಮದ ಹಿಂಸಾತ್ಮಕ ವ್ಯವಸ್ಥೆಗೆ ಬೇಸತ್ತು ಮತಾಂತರಗೊಂಡಿರುವುದನ್ನು ಕಾಣಬಹುದಾಗಿದೆ.

ವರ್ತಮಾನದ ಮತಾಂತರದ ಚರ್ಚೆಯು ಮತಾಂತರಕ್ಕಿರಬಹುದಾದ ಚಾರಿತ್ರಿಕ ವಿಭಿನ್ನತೆಗಳನ್ನು ಒಳಗೊಳ್ಳದೆ ಸೀಮಿತವಾದಂತೆನಿಸುತ್ತದೆ. ಕೆಲವು ಚಿಂತನೆಗಳನ್ನು ಹೊರತುಪಡಿಸಿ ಹೇಳುವುದಾದರೆ ಬಹುತೇಕ ಚಿಂತನೆಗಳು ಮತಾಂತರಗೊಳ್ಳುವವರನ್ನು ಮುಗ್ಧರು, ಅಮಾಯಕರು, ದಡ್ಡರು ಎಂದು ದಾಖಲಿಸುತ್ತವೆಯೇ ವಿನಃ ಚಾರಿತ್ರಿಕವಾಗಿ ಪ್ರತಿರೋಧದ ಭಾಗವಾಗಿ ಹಾಗೂ ಸಾಮಾಜಿಕ, ಆರ್ಥಿಕ, ರಾಜಕೀಯ ಕಾರಣಗಳಿಗಾಗಿ ಮತಾಂತರದ ಪ್ರಕ್ರಿಯೆಗಳು ನಡೆದಿವೆಯೆಂಬುದನ್ನು ಒಳಗೊಳ್ಳದೆ ಇರುವುದನ್ನು ಕಾಣಬಹುದು.

ಮತಾಂತರಕ್ಕಿರುವ ಚಾರಿತ್ರಿಕ ಸ್ವರೂಪವನ್ನು ಗಮನಿಸಿ ಇದನ್ನು ನವೋದಯ ಸಾಹಿತ್ಯ ಈ ಚರ್ಚೆಯನ್ನೂ ಒಳಗೊಂಡಿದೆ ಎಂದು ನೋಡಿದರೆ, ಅಲ್ಲಿ ಇದಕ್ಕೆ ಬೇರೆ ಆಯಾಮಗಳು ತೆರೆದುಕೊಳ್ಳುತ್ತವೆ. ನವೋದಯ ಸಾಹಿತ್ಯವು ಮತಾಂತರವನ್ನು ವಸಾಹತುಶಾಹಿಯ ಸಂದರ್ಭಕ್ಕೆ ಸೀಮಿತಗೊಳಿಸುತ್ತದೆ. ವಸಾಹತುಶಾಹಿ ನಿರ್ಮಿಸುತ್ತಿದ್ದ ಸಾಮಾಜಿಕ-ರಾಜಕೀಯ ಒತ್ತಡಗಳು ಇದಕ್ಕೆ ಕಾರಣವಾಗಿರ-ಬಹುದಾಗಿದೆ. ಅಥವಾ ಮತಾಂತರಕ್ಕಿರಬಹುದಾದ ಇತಿಹಾಸವನ್ನು ಗಮನಿಸುವ ಅಗತ್ಯವೂ ನವೋದಯ ಸಾಹಿತಿಗಳಿಗಿರಲಿಲ್ಲವೆನಿಸುತ್ತದೆ. ಇವರು ತಮ್ಮ ಕಾಲಘಟ್ಟದಲ್ಲಿದ್ದ ಎಲ್ಲ ಧಮನಕಾರಿ ವ್ಯವಸ್ಥೆಗಳಿಗೆ ಪರ್ಯಾಯವಾಗಿ ಉದಾರವಾದ ಮಾನವೀಯತೆಯನ್ನು ಕಟ್ಟುತ್ತಿದ್ದರು. ಹಾಗಾಗಿ ಅವರಿಗೆ ಮತಾಂತರ ಮತಪ್ರಚಾರ ವಸಾಹತುಶಾಹಿಯ ಹುನ್ನಾರಗಳಲ್ಲಿ ಒಂದೆಂದು ಅದನ್ನು ವಸಾಹತುಶಾಹಿಯ ವಿರೋಧದ ಪ್ರಮುಖ ಅಂಶಗಳನ್ನಾಗಿಸಿದರು.

ನವೋದಯ ಕಾಲಘಟ್ಟವು ಪರಂಪರೆಯನ್ನು ವಿಶ್ಲೇಷಿಸುತ್ತ ಅಲ್ಲಿನ ಜಾತಿಪದ್ಧತಿ, ವರ್ಗ, ವರ್ಣ ಪದ್ಧತಿಗಳಿಗೆ ಪ್ರತಿಕ್ರಿಯಿಸಿತು. ಹೀಗೆ ಮಾಡುತ್ತಾ ಪರಂಪರೆಯೊಂದಿಗೆ ಮುಖಾಮುಖಿಯಾಯಿತು. ಪರಂಪರೆಯನ್ನು ಕುರಿತಂತೆ ಆ ಸಂದರ್ಭದಲ್ಲಿ ಎರಡು ಮುಖ್ಯ ವಾಗ್ವಾದಗಳನ್ನು ಚರ್ಚಿಸಿದರೆ ನವೋದಯ ಸಾಹಿತ್ಯ ಪರಂಪರೆಯನ್ನು ಕುರಿತ ಯಾವ ಧಾರೆಯನ್ನು ಒಳಗೊಳ್ಳುತ್ತದೆ ಎಂಬುದನ್ನು ತಿಳಿಯಬಹುದೆನಿಸುತ್ತದೆ. ಪರಂಪರೆಯ ಬಗೆಗೆ ಎರಡು ಭಿನ್ನವಾದ ವಾಗ್ವಾದಗಳನ್ನು ಹುಟ್ಟುಹಾಕಿದವರು ಗಾಂಧಿ ಮತ್ತು ಅಂಬೇಡ್ಕರ್. ಗಾಂಧಿ ಪರಂಪರೆಯಲ್ಲಿರುವ ಅಸಮಾನತೆಗಳನ್ನು ನೋಡುವುದು ಹಾಗೂ ಅದಕ್ಕೆ ಪರಿಹಾರಗಳನ್ನು ಹುಡುಕುವುದು ಹಿಂದೂ ಧರ್ಮದ ಚೌಕಟ್ಟಿನಲ್ಲಿ. ಹಿಂದೂ ಧರ್ಮದ ಸುಧಾರಣೆಯ ಬಗೆಗೆ ಗಾಂಧಿ ಮಾತನಾಡುತ್ತಾರೆ. ಈ ವಿಷಯದಲ್ಲಿ ಅಂಬೇಡ್ಕರರದು ಭಿನ್ನವಾದ ನೋಟ. ಅವರು ಹಿಂದೂ ಧರ್ಮದ ಅಸ್ತಿತ್ವವಿರುವದೇ ಜಾತಿ ಶ್ರೇಣೀಕರಣದ ಆಧಾರದ ಮೇಲೆ. ಒಂದು ವೇಳೆ ಜಾತಿ ವಿನಾಶದ ಬಗ್ಗೆ ಮಾತನಾಡಿದರೆ ಹಿಂದೂ ಧರ್ಮದ ಅಸ್ತಿತ್ವವೇ ಇರುವುದಿಲ್ಲ. ಬದಲಾಗಿ ಈ ಸಮಾಜದ ದಲಿತರನ್ನು ಹಿಂದೂ ಧರ್ಮ ಚಾರಿತ್ರಿಕವಾಗಿ ಹೊರಗಿಟ್ಟಿದೆ. ಹಾಗಾಗಿ ಹಿಂದೂ ಧರ್ಮದ ಚೌಕಟ್ಟಿನಲ್ಲಿ ಪರಿಹಾರಗಳನ್ನು ಹುಡುಕುವುದನ್ನು ಅಂಬೇಡ್ಕರ್ ನಿರಾಕರಿಸುತ್ತಾರೆ. ಈ ಎರಡು ಚಿಂತನೆಗಳನ್ನು ಕನ್ನಡ ನವೋದಯ ಒಳಗೊಳ್ಳುವುದು ಗಾಂಧಿ ಮಾದರಿಯನ್ನು ಕುವೆಂಪುರವರ "ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ", 'ಶೂದ್ರತಪಸ್ವಿ' ಗಳು ತೊಡಗುವುದೇ ಹಿಂದೂ

ಧರ್ಮ ಪರಿಷ್ಕರಣೆಯಲ್ಲಿ. ಕುವೆಂಪುರವರನ್ನು ಅಥವಾ ನವೋದಯದ ಲೇಖಕರನ್ನು ಗಾಂಧಿ ಪ್ರಭಾವಿಸಿದಂತೆ, ಅಂಬೇಡ್ಕರರ ಪ್ರಭಾವಗಳು ಎಲ್ಲಿಯೂ ಆದಂತೆ ಕಾಣುವುದಿಲ್ಲ.

ಮತಾಂತರಕ್ಕೆ ಸಂಬಂಧಿಸಿದಂತೆ ಮಾತನಾಡುವಾಗಲೂ ಅಂಬೇಡ್ಕರ್ ನವೋದಯ ಲೇಖಕರನ್ನು ಪ್ರಭಾವಿಸಿಲ್ಲ. ನವೋದಯ ಸಾಹಿತ್ಯ ಮತಾಂತರವನ್ನು ವಿರೋಧಿಸುತ್ತಾ ಸಾಗುತ್ತಿರುವಾಗಲೇ ಅಂಬೇಡ್ಕರ್ ದಲಿತ ಸಮುದಾಯಕ್ಕೆ ಮತಾಂತರವಾಗುವಂತೆ ಕರೆ ಕೊಡುತ್ತಾರೆ. ಅಂಬೇಡ್ಕರ್ "ನಾನು ಹಿಂದೂವಾಗಿ ಹುಟ್ಟಿದ್ದೇನೆ, ಆದರೆ ಹಿಂದೂವಾಗಿ ಸಾಯಲಾರೆ" ಎಂದು ಘೋಷಿಸುತ್ತಾರೆ. ಈ ಚಿಂತನೆಗಳು ನವೋದಯ ಲೇಖಕರನ್ನು ಎಲ್ಲಿಯೂ ಪ್ರಭಾವಿಸದೆ ಮತಾಂತರಕ್ಕೆ ಬೇರೆಯದೇ ರೀತಿಯ ಪ್ರತಿಕ್ರಿಯೆಗಳನ್ನು ತೋರುತ್ತವೆ. ಇದಕ್ಕೆ ಮಾಸ್ತಿಯವರ 'ಇಲ್ಲಿಯ ತೀರ್ಪು' ಕತೆ ಹಾಗೂ ಕುವೆಂಪುರವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿನ ಧೋರಣೆಗಳನ್ನು ಗಮನಿಸಿದರೆ ತಿಳಿಯಬಹುದು.

ಮಾಸ್ತಿಯವರ 'ಇಲ್ಲಿಯ ತೀರ್ಪು' ಕತೆಯಲ್ಲಿ ಕ್ರೈಸ್ತಪಾದ್ರಿಯೊಬ್ಬನು ಹಳ್ಳಿಯ ಬೋಯಿಗಳಿಬ್ಬರ ನಂಬಿಕೆ-ಆಚರಣೆಗಳನ್ನು ಮೌಢ್ಯವೆಂದು ತಿಳಿದು ಅವರನ್ನು ನಾರೀಕರಣಗೊಳಿಸುವ ಕ್ರಿಯೆಯಲ್ಲಿ ತೊಡಗುತ್ತಾನೆ. ಇಲ್ಲಿ 'ಆರ್ಥರ್ ಹೆನ್ರಿ' ಎಂಬ ಪಾದಿ ಆ ಹಳ್ಳಿಯಲ್ಲಿ ಮಾಡುವ ಮತಾಂತರ ಪ್ರಕ್ರಿಯೆಯನ್ನು ವಿಡಂಬಿಸುತ್ತಾರೆ. ಇಲ್ಲಿ ನಾಗರಿಕ ಅಹಂಕಾರವನ್ನು ಮತಾಂತರ ಪ್ರಕ್ರಿಯೆಯ ಭಾಗವಾಗಿ ಮಾಸ್ತಿ ಜಿಜ್ಞಾಸೆಗೆ ಒಳಪಡಿಸುತ್ತಾರೆ.

"ನಮ್ಮಲ್ಲಿ ಅನೇಕರಿಗೆ ಈ ಧರ್ಮವು ತತ್ವರಹಿತವಾದುದೆಂದು ಉದ್ಧಾರಕ ಶಕ್ತಿಯಿಲ್ಲದುದೆಂದು ತೋರಬಹುದು. ಸುಸಂಸ್ಕೃತವಾದ ನಮ್ಮ ಬುದ್ಧಿಗೆ ಕ್ಲಿಷ್ಟವಾದ ತತ್ವಗಳೇ ಸಮ್ಮತ : ಸುಲಭವಾದ ತತ್ವಗಳಿಂದ ನಾವು ಜಿತರಾಗುವುದಿಲ್ಲ. ಇದು ನಾಗರಿಕತೆಯ ಹೃದಯ..... ನಾವು ರಾಮಾಬೋಮಿಯ ತಿಳಿವನ್ನು ನೋಡಿ ಇದು ಮಾನವನನ್ನು ಉದ್ಧಾರ ಮಾಡಬಲ್ಲ ತಿಳಿವಲ್ಲ, ಇವನನ್ನು ನಮ್ಮಂತೆಯೇ ಮಾಡಬೇಕು, ಎನ್ನುವೆವು. ಅರ್ಥರ್ ಹೆನ್ರಿ ಸಾಹೇಬರ ಮತವು ಇದೇ. ಇವರು ರಾಮಾಬೋಯಿಯನ್ನು ಮತ್ತು ಅವನಂತಹ ಒರಟು ಜನರನ್ನು ಅವರ ಈ ತೆರದ ಅಜ್ಞಾನದಿಂದ ಉಳಿಸಿ ಅವರಿಗೆ ಸುಜ್ಞಾನವನ್ನು ಕೊಡಲಿಕ್ಕಾಗಿ ಇಂಗ್ಲೆಂಡಿನಿಂದ ಇಲ್ಲಿಗೆ

ಬಂದಿದ್ದಾರೆ. ಬಹಳ ಮಟ್ಟಿಗೆ ಒಳ್ಳೆಯ ಕೆಲಸವನ್ನು ಮಾಡಿದ್ದಾರೆ. ಆದರೆ ಮಾಡುವುದರಲ್ಲಿ ಸ್ವಲ್ಪ ಸರಿಯಾದ ಮಾರ್ಗವನ್ನು ಬಿಟ್ಟಿದ್ದರಿಂದಲೋ, ಇಲ್ಲ ಸರಿಯಾಗಿದ್ದರೂ ಸಜ್ಜನರಿಗೆ ಆಗಾಗ ತೊಂದರೆಗಳು ಬರಬೇಕಾಗಿರುವುದರಿಂದಲೋ, ಅವರ ಬೋಧನೆಯ ಫಲವಾಗಿ ಹೀಗೆ ಹೇಳಬಹುದು. ರಾಮಾಬೋಯಿಯೂ ಮತ್ತು ತಿಮ್ಮಾಬೋಯಿಯು ಈ ದಿನ ನನ್ ಕೋರ್ಟಿನ ಮುಂದೆ ತಪ್ಪಿತಸ್ಥರಾಗಿದ್ದಾರೆ; ಅರ್ಥರ್ ಹೆನ್ರಿಯವರು ದಪ್ಪಪಟ್ಟು ಪಿರ್ಯಾದಿಯಾಗಿ ನಿಂತಿದ್ದಾರೆ"॥

ಮಾಸ್ತಿಯವರು ಇಲ್ಲಿ ವಸಾಹತು ಶಾಹಿ "ಸುಸಂಸ್ಕೃತ ರಾಜಕೀಯ ಪರಿಕಲ್ಪನೆಯನ್ನು ಮತಾಂತರ ಪ್ರಕ್ರಿಯೆಗಾಗಿ ಬಳಸಿಕೊಳ್ಳುವುದನ್ನು ವಿಡಂಬಿಸುತ್ತಾರೆ. ಈ ಕಥೆಯನ್ನು ಮಾಸ್ತಿಯವರು ಹೇಳುವಾಗ ಅನುಸರಿಸುವ ತಂತ್ರವೇ ಬಹಳ ಕುತೂಹಲಕಾರಿಯಾದದ್ದು. ಇವರ ಬಹುತೇಕ ಕತೆಗಳ ವೈಶಿಷ್ಟ್ಯಗಳಲ್ಲಿ ಅವರು ಕತೆ ಹೇಳಲು ಬಳಸುವ ತಂತ್ರಗಾರಿಕೆಯೂ ಒಂದು. ಈ ಕತೆಯಲ್ಲಿ ಕೋರ್ಟ್ನೀ ಸಾಹೇಬನ ಡೈರಿಯಲ್ಲಿನ ಒಂದು ದಿನದ ಘಟನೆಗಳನ್ನು ತರ್ಜುಮೆ ಮಾಡುತ್ತಿರುವುದಾಗಿ ಮಾಸ್ತಿ ಹೇಳುತ್ತಾರೆ. ಹೀಗೆ ಹೇಳುವುದರೊಂದಿಗೆ ವಸಾಹತು ಶಾಹಿಯ ಮತಾಂತರ ರಾಜಕೀಯವನ್ನು ಪ್ರಶ್ನೆಗೆ ಒಳಪಡಿಸುತ್ತಾರೆ. ಇಲ್ಲಿ ಮಾಸ್ತಿ ಹೇಳುತ್ತಿರುವುದು ಬೋಯಿ ಜಾತಿಗೆ ಸೇರಿದ ರಾಮಾಬಾಯಿ ಮತ್ತು ತಿಮ್ಮಾಬೋಯಿಗಳಿಗೆ ಸಂಬಂಧಿಸಿದ್ದು ಎಂಬುದು ಮುಖ್ಯ. ಇಲ್ಲಿ ವಸಾಹತುಶಾಹಿಯನ್ನು ಪ್ರತಿರೋಧಿಸುವಂತೆ ಜಾತಿ ಪದ್ಧತಿಯೊಳಗಿನ ಕ್ರೌರ್ಯಗಳನ್ನು ಪ್ರಶ್ನಿಸುವುದಿಲ್ಲ. ಅಂಬೇಡ್ಕರರ ವಿಚಾರಧಾರೆಯ ಪ್ರಭಾವದ ಕುರಿತಾಗಿ ಚರ್ಚಿಸುವುದರಿಂದ ಅಂಬೇಡ್ಕರರು ಪರಂಪರೆಯನ್ನು ನಿರ್ವಹಿಸುವ ಬಗೆಗೂ ನವೋದಯ ಲೇಖಕರು ಪರಂಪರೆಯನ್ನು ನೋಡುವ ಕ್ರಮಕ್ಕೂ ಇರಬಹುದಾದ ವ್ಯತ್ಯಾಸಗಳನ್ನು ಗುರ್ತಿಸಬಹುದಾಗಿದೆ. ಆದ್ದರಿಂದ ಮಾಸ್ತಿಯವರ ಕತೆಯ ಜೊತೆಗೆ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ವಿವರವೊಂದನ್ನು ನೋಡಬಹುದು.

"೧೮೮೫ನೆಯ ಇಸವಿ ಸೆಪ್ಟೆಂಬರು ೧೧ನೆಯ ತೇದಿ ಸೋಮವಾರ ತೀರ್ಥಹಳ್ಳಿಯ ಪಾದ್ರಿ ಅಥವಾ ಉಪದೇಶಿ ಜೀವರತ್ನಯ್ಯ ಕಾಡುದಾಟಿ, ಆಗತಾನೇ ಕಳೆಕಿತ್ತು ತೆವರು ಕುಯ್ದಾಗಿದ್ದ ಗದ್ದೆ ಕೋಗಿನ ಅಂಚುಗಳನ್ನು ಹತ್ತಿ ಹಾರಿ ತೋಟದ ಬೇಲಿಯ ತಡಬೆಯನ್ನು ಎಚ್ಚರಿಕೆಯಿಂದ ಏರಿ ಇಳಿದು, ಅಡಕೆ ಮರದ ಸಾರದ ಮೇಲೆ ಅಡೆಹಳ್ಳವನ್ನು ಉತ್ತರಿಸಿ, ಮನೆಯೆಡೆಯ ಕಣದ ಬೇಲಿಯೊಡ್ಡೆಗೆ ಹಾಕಿದ್ದ

ಉಣುಗೋಲನ್ನು ಸರಿಸಿ, ಸಿಂಧುವಳ್ಳಿ ಮನೆಗೆ ಪ್ರವೇಶಿಸಿದುದು ತಾನು ಎಂತಹ ಲೋಕ ಪ್ರಸಿದ್ಧವಾಗಲಿರುವ ಜಗದ್‌ಭವ್ಯ ಮಹದ್ ಘಟನೆಯೊಂದರೊಡನೆ ಪ್ರತಿಸ್ಪರ್ಧಿಯಾಗಿದ್ದೇನೆ ಎಂಬುದನ್ನು ಅರಿತಿರಲಿಲ್ಲ. ಆ ದಿನವೆ ಕ್ರೈಸ್ತಮತ ಶ್ರದ್ಧೆಯ ಮತ್ತು ಮಿಶನರಿ ಮತಾಂಧತೆಯ ಶಕ್ತಿಕೇಂದ್ರವಾಗಿದ್ದ ಅಮೇರಿಕಾ ದೇಶದ ಚಿಕಾಗೋ ನಗರದಲ್ಲಿ ನೆರೆದಿದ್ದ ಸರ್ವಧರ್ಮ ಸಮ್ಮೇಳನದಲ್ಲಿ ಸ್ವಾಮಿ ವಿವೇಕಾನಂದು ಹಿಂಧೂಧರ್ಮ ಮತ್ತು ವೇದಾಂತ ದರ್ಶನದ ಮಹೋನ್ನತಿಯನ್ನು ವಿಶ್ವವೈಶಾಲ್ಯವನ್ನು ತಮ್ಮ ಸಿಂಹ ಕಂಠದಿಂದ ಘೋಷಿಸಿದ್ದರು ! ಅದನ್ನು ಆಲಿಸಿದ್ದ ಅನ್ಯಧರ್ಮೀಯ ವಿದ್ವಜ್ಜನ ಸಮೂಹವು ಆನಂದೋನ್ನತ್ತವಾಗಿ ಜಯಘೋಷ ಮಾಡಿತ್ತು! ಹಿಂದೂಧರ್ಮ ಮತ್ತು ವೇದಾಂತ ದರ್ಶನದ ದಿಗ್ವಿಜಯ ಧ್ವಜ ಗಗನಚುಂಬಿಯಾಗಿ ಏರಿ ಹಾರಿ ಲೋಕಲೋಚನಗಳನ್ನೆ ಬೆರಗುಗೊಳಿಸಿತ್ತು ! ವಿಂಧ್ಯ ಹಿಮಾಚಲ ಸಹ್ಯಾದ್ರಿಗಳಲ್ಲಿಯೂ ಆ ದಿವ್ಯಧ್ವನಿ ಅನುರಣಿತವಾಗಿತ್ತು.

ಆಗಿತ್ತೆ ? ಎಲ್ಲಿ ಆಗಿತ್ತು ? ಹಾಗಿದ್ದರೆ ಉಪದೇಶಿ ಜೀವರತ್ನಯ್ಯ ಸಿಂಧುವಳ್ಳಿ ಚಿನ್ನಪ್ಪಗೌಡರನ್ನು ಕಿಲಸ್ತರ ಜಾತಿಗೆ ಸೇರಿಸಲು ಎಂದಿಗಾದರೂ ಸಾಧ್ಯವಾಗುತ್ತಿತ್ತೇ? ನಿಜ, ಅವರಿನ್ನೂ ಸೇರಿರಲಿಲ್ಲ : ಆದರೆ, ದೀವದಾನೆ ಕಾಡಾನೆಯನ್ನು ಆಕರ್ಷಿಸಿ ಖೆಡ್ಡಾಕ್ಕೆ ಕೆಡಹಲು ಪ್ರಯತ್ನಿಸುವಂತೆ, ಪಾದ್ರಿ ಜೀವರತ್ನಯ್ಯ ಚಿನ್ನಪ್ಪನ ಕಾಲಡಿಯ ಕುರುಡು ಆಚಾರ ಮತ್ತು ಮೂಢನಂಬಿಕೆಗಳ ಭೂಮಿಯನ್ನು ಸಡಿಲಗೊಳಿಸಿ, ಅಗೆದು ತೆಗೆದು ಕ್ರೈಸ್ತಮತದ ಖೆಡ್ಡಾ ಕಂದಕವನ್ನು ಮೆಲ್ಲಗೆ ನಿರ್ಮಿಸುತ್ತಿದ್ದನು.

ಅತ್ತ ಉತ್ತರಾರ್ಧಗೋಲದ ಬಹುದೂರ ಸಾಗರದಾಚೆಯ ಒಂದು ಆಧುನಿಕ ನಾಗರೀಕತೆಯ ಮತ್ತು ವೈಜ್ಞಾನಿಕ ಪ್ರಗತಿಯ ಶ್ರೀಮಂತ ದೇಶದಲ್ಲಿ ಪ್ರಪ್ರಾಚೀನ ಭಾರತ ಸಂಸ್ಕೃತಿಯ ಸರ್ವೋತ್ತಮ ಪ್ರತಿನಿಧಿಯೊಬ್ಬನು ವೇದಾಂತ ದರ್ಶನದ ಮೇಲೆ ನಿಂತಿರುವ ಸನಾತನ ಹಿಂಧೂಧರ್ಮದ ಸರ್ವೋತ್ಕೃಷ್ಟತೆಯನ್ನು ಅಧಿಕಾರವಾಣಿಯಿಂದ ಪ್ರಸಾರ ಮಾಡುತ್ತಿದ್ದಾಗಲೇ, ಅದನ್ನೆಲ್ಲ ಸದ್ದುಗದ್ದಲವಿಲ್ಲದೆ ಮೂದಲಿಸುವಂತೆ, ಯಃಕಃಶ್ಚಿತ ಪಾದ್ರಿಯೊಬ್ಬನು ಅದರಲ್ಲಿಯೂ ನೇಟಿವ್ ಪಾದ್ರಿ–ಘೋರಾರಣ್ಯಮಯವಾದ ಸಹ್ಯಾದ್ರಿ ಶ್ರೇಣಿಯ ಮಲೆನಾಡಿನ ಕೊಂಪೆಯ ಅಜ್ಞ ಬೇಸಾಯಗಾರನೊಬ್ಬನಿಗೆ ಹಿಂದೂಧರ್ಮದ ಅನಾಚಾರ, ಅವಿವೇಕ, ಸಂಕುಚಿತ ಮನೋಭಾವ, ಜಾತಿಮತ ಪಕ್ಷಪಾತ, ಬ್ರಾಹ್ಮಣರ ತಿರಸ್ಕಾರ, ಶೂದ್ರರ ದೈನ್ಯ, ಅಧೋಗತಿ, ಕಲ್ಲು ಮಣ್ಣು ಮರ ದೆವ್ವಗಳ ಪೂಜೆ ಇತ್ಯಾದಿಗಳನ್ನು ಯೇಸುಕ್ರಿಸ್ತನ

ಮತ್ತು ಕ್ರೈಸ್ತಮತದ ಪರೋಪಕಾರ, ಪರಾನುಕಂಪನ ನೀತಿ, ತ್ಯಾಗ, ಭಕ್ತಿ, ಉದ್ದಾರಕ ಸಾಮರ್ಥ್ಯ ಇತ್ಯಾದಿಗಳನ್ನು ಕುರಿತು ಮನಮುಟ್ಟುವಂತೆ ಉಪದೇಶ ಮಾಡುತ್ತಿದ್ದನು, ಗೌಡರ ಮನೆಯ ಚಾವಡಿಯಲ್ಲಿಯೇ ಕುಳಿತು, ಅವನದ್ದೆ, ತೋಟ, ಅಂಗಳದ ತುಳಸಿಕಟ್ಟೆಯ ದೇವರು ಮತ್ತು ಎದುರಿಗೆ ಕಾಣುತ್ತಿದ್ದ ಭೂತದ ಬನ ಇವುಗಳ ಇದಿರಿನಲ್ಲಿಯೇ !

ಅಮೇರಿಕಾದ ಚಿಕಾಗೋ ಬಹುದೂರದಲ್ಲಿರಬಹುದು ? ವಿವೇಕಾನಂದರ ಉತ್ತಾಲ ಧ್ವನಿ ಮಲೆನಾಡಿನ ಕೊಂಪೆಗೆ ಮುಟ್ಟದಿದ್ದಿರಬಹುದು ? ಆದರೆ ಸಮೀಪದಲ್ಲಿಯೆ ಇದ್ದುವಲ್ಲ –ಶೃಂಗೇರಿ, ಧರ್ಮಸ್ಥಳ ಇತ್ಯಾದಿ ಪವಿತ್ರ ಕ್ಷೇತ್ರಗಳ ಗುರುಪೀಠಗಳು ? ಅವೇನು ಮಾಡುತ್ತಿದ್ದವು ? ಅದ್ವೈತ ತತ್ವದಿಂದ ಬೌದ್ಧಧರ್ಮವನ್ನೆ ಭರತ ವರ್ಷದಿಂದ ಅಟ್ಟಿ ವೈದಿಕ ಧರ್ಮ ಸ್ಥಾಪನೆ ಮಾಡಿದನೆಂದು ಹೇಳಲಾಗುತ್ತಿರುವ ಆಚಾರ್ಯ ಶಂಕರನ ಮೂಲ ಪೀಠದಲ್ಲಿ ವಿರಾಜಮಾನರಾಗಿದ್ದ ಸನ್ಯಾಸಿವರೇಣ್ಯರು ಏನು ಮಾಡುತ್ತಿದ್ದರು ?".

ಇಲ್ಲಿ ಕುವೆಂಪು ಸ್ಪಷ್ಟವಾಗಿ ಹಿಂದೂ ಪರಂಪರೆಯೊಳಗಿನ ಮೌಢ್ಯಗಳನ್ನು ವಸಾಹತುಶಾಹಿ ಒಂದು ಬಂಡವಾಳವಾಗಿ ಬಳಸಿಕೊಂಡು ಮತಾಂತರ ಪ್ರಕ್ರಿಯೆಯಲ್ಲಿ ತೊಡಗುವ ಹುನ್ನಾರವನ್ನು ಚಿತ್ರಿಸುತ್ತಾರೆ. ಇದಕ್ಕೆ ವಿವೇಕಾನಂದರನ್ನು ಮುಖಾಮುಖಿಯಾಗಿಸುತ್ತಾರೆ. ಹಿಂದೂ ಪರಂಪರೆಯನ್ನು ಸುಧಾರಿಸುವ ಚಿತ್ರಣಗಳನ್ನು ನೀಡುತ್ತಾರೆ. ಈ ಎರಡೂ ವಿವರಗಳು ಮಾತನಾಡುವುದು ಹಿಂದೂ ಪರಂಪರೆಯೊಳಗಿನ ಸುಧಾರಣೆಯ ಬಗೆ. ಇಲ್ಲಿ ವಿವರಗಳ ಹಿಂದೆ ಗಾಂಧಿಯ ಚಿಂತನೆಯ ಪ್ರಭಾವವನ್ನು ಕಾಣಬಹುದಾಗಿದೆ. ಈ ಕತೆಗಳಲ್ಲಿನ ವಿವರಗಳಿಗೆ ತದ್ವಿರುದ್ಧವೆಂಬಂತೆ ಅಂಬೇಡ್ಕರ್ ಪರಂಪರೆಯನ್ನು ನಿರ್ವಹಿಸುತ್ತಾರೆ. ಅಂಬೇಡ್ಕರ್ ಪರಂಪರೆಯ ಸುಧಾರಣೆಯ ಬಗ್ಗೆ ತಕರಾರುಗಳನ್ನು ಎತ್ತುತ್ತಾರೆ. ಅವರಿಗೆ ಹಿಂದೂ ಪರಂಪರೆಯಿಂದ ಬಿಡುಗಡೆಗೊಳ್ಳುವ ಹಾಗೂ ಇಲ್ಲಿನ ಅವಮಾನಿತ ಜಾತಿಗಳಿಗೇ ಇರುವ ಪರ್ಯಾಯ ಪರಂಪರೆಯನ್ನು ಶೋಧಿಸುತ್ತಾರೆ. ಅಂಬೇಡ್ಕರ್ ವಸಾಹತುಶಾಹಿಯನ್ನು ಸಮರ್ಥಿಸುತ್ತಾರೆಂದಲ್ಲ, ಅಂಬೇಡ್ಕರ್ ಮತಾಂತರದ ಪರವಾಗಿದ್ದಾರೆಂದರೆ ಅದು ವಸಾಹತುಶಾಹಿಗಳ ಮತಾಂತರ ಪ್ರಕ್ರಿಯೆಗಳನ್ನು ಸಮರ್ಥಿಸುತ್ತಾರೆಂದಲ್ಲ. ಅಂಬೇಡ್ಕರರಿಗೆ ಹಿಂದೂಧರ್ಮದ ಬಗೆಗಿದ್ದ ಪ್ರಶ್ನೆಗಳೇ ಇಸ್ಲಾಂ ಹಾಗೂ ಕ್ರಿಶ್ಚಿಯನ್ ಧರ್ಮಗಳ ಬಗೆಗೂ ಇದ್ದವು. ಅದಕ್ಕಾಗಿಯೇ ಅವರು

ಮತಾಂತರಗೊಳ್ಳುವಾಗ ಬೌದ್ಧ ಧರ್ಮವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಈ ಆಯ್ಕೆಯೂ ಕೂಡ ಅತ್ಯಂತ ವೈಚಾರಿಕ ನಿಕಶಕ್ಕೊಡ್ಡಿಯೇ ಸಂಭವಿಸಿದ್ದು.

ಹಾಗಾಗಿ ವಸಾಹತುಶಾಹಿಯ ವಿರೋಧವನ್ನು ಹಾಗೂ ಹಿಂದೂಧರ್ಮದ ಅಮಾನವೀಯತೆಗಳನ್ನು ವಿರೋಧಿಸುವಾಗ ಅಂಬೇಡ್ಕರ್ ಭಿನ್ನವಾಗಿ ಕಾಣುತ್ತಾರೆ. ಪರಿಹಾರಗಳನ್ನು ಧರ್ಮದ ಹೊರಗೆ ಹುಡುಕುತ್ತಾರೆ. ನವೋದಯ ಲೇಖಕರಿಗೆ ಹಿಂದೂಧರ್ಮದ ಅಮಾನವೀಯತೆಗಳನ್ನು ವಿರೋಧಿಸುವಾಗ ಧರ್ಮದ ಹೊರಗೆ ಕಂಡುಕೊಳ್ಳುವ ಇರಾದೆ ಇರಲಿಲ್ಲ, ಇದರ ಬದಲಿಗೆ ಅಂಬೇಡ್ಕರರ ಈ ಚಿಂತನೆಯ ಪ್ರಭಾವವು ನವೋದಯದ ಲೇಖಕರ ಮೇಲೆ ಆಗದಿದ್ದರೆ ಬೇರೆಯದೇ ರೀತಿಯ ಪರಂಪರೆಯ ನಿರ್ವಚನಗಳು ಅವರ ಕೃತಿಗಳಲ್ಲಿ ಹುಟ್ಟಲು ಸಾಧ್ಯವಿತ್ತು ಎನಿಸುತ್ತದೆ.

## ಟಿಪ್ಪಣಿಗಳು

೧. ಸಂಸ್ಕೃತಿ ಕಥನ, ಪುಟ-೧೬೨

೨. ಚರಿತ್ರೆ, ಪುಟ-೧೦೩

೩. ಚರಿತ್ರೆ, ಪುಟ-೧೦೭

೪. ಚರಿತ್ರೆ, ಪುಟ ೧೧೦

೫. ಗೌತಮಬುದ್ಧ ಮತ್ತು ಬೌದ್ಧಧರ್ಮ, ಪುಟ-೦೨

೬. ಪ್ರಾಚೀನ ಭಾರತದ ಇತಿಹಾಸ, ಪುಟ-೪೮

೭. ಅದೇ. ಪುಟ-೪೭

೮. ಸುವರ್ಣ ವಿಚಾರ ಸಾಹಿತ್ಯ, ಪುಟ ೪೧೭

೯. ಡಾ.ಬಿ.ಆರ್.ಅಂಬೇಡ್ಕರ್, ಪುಟ-೧೦೩

೧೦. ಕೋಮುವಾದದ ಕರಾಳ ಮುಖಗಳು, ಪುಟ-೪೪

೧೧. ಮಾಸ್ತಿಕತೆಗಳು ಸಂಪುಟ-೧-೧೫-೧೪೦

೧೨. ಮಲೆಗಳಲ್ಲಿ ಮದುಮಗಳು

# ಅಧ್ಯಾಯ-೩

## ವಸಾಹತುಶಾಹಿಗೆ ನವೋದಯ ಕಥನ ಸಾಹಿತ್ಯ ತೋರಿದ ಪ್ರತಿಕ್ರಿಯೆ

ಸಮಾಜದ ಮತ್ತು ಮನುಷ್ಯನ ಸ್ಥಿತ್ಯಂತರಗಳ ಅಭಿವ್ಯಕ್ತಿ ಮಾಧ್ಯಮವಾಗಿ ಕಾದಂಬರಿ ಪ್ರಕಾರವನ್ನು ನೋಡಬಹುದು. ಮನುಷ್ಯ ಮತ್ತು ಸಮಾಜದ ಸ್ಥಿತಿಗತಿಗಳ ಬದಲಾವಣೆಯನ್ನು ಸಮಗ್ರವಾಗಿ ವಿಶ್ಲೇಷಿಸುವ ಮತ್ತು ದಾಖಲಿಸುವ ಮಾಧ್ಯಮವಾಗಿ ಕಾದಂಬರಿ ರೂಪುಗೊಂಡಿತು. ಸಾಮಾಜಿಕ ಪರಿಸರವನ್ನು ಆಧಾರವಾಗಿಟ್ಟುಕೊಂಡು ಚಿತ್ರಿತಗೊಳ್ಳುತ್ತಿತ್ತು. ಲೇಖಕ ತನ್ನ ಪರಿಸರವನ್ನೇ ಕೇಂದ್ರವಾಗಿಟ್ಟುಕೊಂಡು ಕಾದಂಬರಿಯನ್ನು ಬರೆಯುತ್ತಿದ್ದರೂ ಒಂದು ಅಂತರವನ್ನು ಸಾಧಿಸುತ್ತಿದ್ದ, ಆದ್ದರಿಂದಲೇ ಸಮಷ್ಟಿ ಬದುಕನ್ನು ಸಮಾಜವನ್ನು ವಿಶ್ಲೇಷಿಸಿ ನೋಡುವ ಸ್ವಾತಂತ್ರ್ಯ ಮತ್ತು ಮನಸ್ಥಿತಿ ಲೇಖಕನಿಗೆ ದೊರೆತಿದೆ. ತನ್ನ ವರ್ಗ ಮತ್ತು ಪರಿಸರಕ್ಕೆ ಸೇರಿದ ಮೌಲ್ಯ ಕಲ್ಪನೆಗಳ ಸಹಾಯದಿಂದ ಸಮಾಜದ ಸ್ಥಿತ್ಯಂತರಗಳನ್ನು ವಿಶ್ಲೇಷಿಸಿ ನೋಡುವುದು ಕಾದಂಬರಿಯಲ್ಲಿ ಸಾಧ್ಯವಾಯಿತು. ಈ ತಂತ್ರ ಯೂರೋಪಿನ ಮಾದರಿಯದ್ದಾಗಿದೆ. ಲೇಖಕನೇ ಸ್ವತಃ ಕಾದಂಬರಿಯ ನಿರೂಪಕನೂ ಆದ್ದರಿಂದ ಕಾದಂಬರಿಯನ್ನು ಒಂದು Documentary ಯಾಗಿಯೂ ಸಹ ನೋಡುವ ಸಾಧ್ಯತಾವಕಾಶಗಳು ಇವೆ.

ಕಾದಂಬರಿ ಮೂಲತಃ ಯೂರೋಪಿನ ಒಂದು ಜನಪ್ರಿಯ ಸಾಹಿತ್ಯ ಪ್ರಕಾರ ಯೂರೋಪಿನಲ್ಲಿ ಔದ್ಯೋಗಿಕ ಕ್ರಾಂತಿ ಮತ್ತು ಬಂಡವಾಳ ಶಾಹಿ ಶಕ್ತಿಯಿಂದ ಮಧ್ಯಮ ವರ್ಗವೊಂದು ಸೃಷ್ಠಿಯಾಯಿತು. ಆ ಮಧ್ಯಮ ವರ್ಗದ ಜನರು ತಮ್ಮ ಆಸೆ, ಕನಸು, ನಿರೀಕ್ಷೆಗಳನ್ನು ಕಾದಂಬರಿಯ ಮೂಲಕವೇ ತುಂಬಿಕೊಳ್ಳುವ ಪ್ರಯತ್ನಗಳನ್ನು ಮಾಡಿದರು. ಯೂರೋಪಿನಲ್ಲಿ ಔದ್ಯೋಗಿಕ ಪ್ರೀತಿಯ ಪರಿಣಾಮವಾಗಿ ವರ್ಗವ್ಯವಸ್ಥೆಯ ಬದಲಾವಣೆಗೆ ತೀವ್ರವಾಗಿ ಒಡ್ಡಿಕೊಳ್ಳುತ್ತಿತ್ತು. ಆದರಿಂದ ಅಲ್ಲಿನ ಬದುಕಿನ ಸ್ಥಿತ್ಯಂತರಗಳೂ ಸಹ ಸುಸ್ಪಷ್ಟವಾಗಿ ಗೋಚರವಾಗುತ್ತಿದ್ದವು. ಈ ಬದಲಾವಣೆಗಳಿಗೆ ತೆರೆದುಕೊಳ್ಳುವವರು ಎಲ್ಲಾ ದೇಶದ ಎಲ್ಲಾ ಸಮಾಜಗಳಲ್ಲೂ ಮಧ್ಯಮ ವರ್ಗದವರೇ ಆಗಿರುತ್ತಾರೆ. ಹಾಗಾಗಿ ಈ ಸ್ಥಿತ್ಯಂತರಗಳ ಸಮಗ್ರ ಗ್ರಹಿಕೆ ಇಲ್ಲಿ ಸಾಧ್ಯವಾಗುತ್ತದೆ. ಅಂತೆಯೇ ಭಾರತದ ವಸಾಹತುಶಾಹಿ ಸಂದರ್ಭದಲ್ಲೂ ಸಹ ದಿಢೀರನೆ ಸ್ಥಿತ್ಯಂತರಗೊಂಡು ಸಮಾಜದ

ಎಲ್ಲಾ ನೆಲೆಗಳಲ್ಲೂ ಗೋಚರವಾಯಿತು. ಈ ಸಂದರ್ಭದಲ್ಲಿ ಇಂಗ್ಲೀಷ್ ಶಿಕ್ಷಣ ಕಲಿತು, ಪಾಶ್ಚಾತ್ಯ ಸಾಹಿತ್ಯದ ಪ್ರೇರಣೆಗೊಂಡು ಕಾದಂಬರಿ ಪ್ರಕಾರವನ್ನು ಕನ್ನಡದಲ್ಲಿ ಅನುಸಂಧಾನ ಮಾಡುವ ಪ್ರಯತ್ನ ಮಾಡಿದರು. ತಮ್ಮ ಕಾದಂಬರಿಗಳ ಮೂಲಕ ಭಾರತೀಯ ಸಮಾಜದಲ್ಲಿ ವಸಾಹತುಶಾಹಿಯಿಂದಾದಂತಹ ಪಲ್ಲಟಗಳನ್ನು, ಸ್ಥಿತ್ಯಂತರಗಳನ್ನು ದಾಖಲಿಸಿ, ವಸಾಹತುಶಾಹಿಗೆ ಪ್ರತಿಕ್ರಿಯಿಸುವುದು ಅನಿವಾರ್ಯವಾಯಿತು. ನವೋದಯ ಕಾಲಘಟ್ಟವು ಸೃಜಿಸಿದ್ದೇ ವಸಾಹತುಶಾಹಿ ಸೃಷ್ಟಿಸಿದ್ದ ಒತ್ತಡಗಳ ನಡುವೆ ಅಂದು ಭಾಷಿಕ, ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ, ಸಾಮಾಜಿಕ, ಶೈಕ್ಷಣಿಕ ಸಂದರ್ಭಗಳು ಪಲ್ಲಟಗೊಳ್ಳುತ್ತಿದ್ದ ಮತ್ತು ಗೊಂದಲದ ಗೂಡಾಗಿದ್ದ ಸ್ಥಿತಿ ಇತ್ತು. ಸಾಹಿತ್ಯವೆಂದರೇನೇ ಬದುಕಿನ, ಸಮಾಜದ ಅನುಭವಗಳಿಗೆ ಸ್ಪಂದಿಸುವಂಥದ್ದು, ಹಾಗಾಗಿ ವಸಾಹತುಶಾಹಿ ಸಂದರ್ಭದಲ್ಲಿ ಹುಟ್ಟಿದ ನವೋದಯ ಸಾಹಿತ್ಯವು ಈ ಗೊಂದಲದ ಅನುಭವಗಳನ್ನು, ಸ್ಥಿತ್ಯಂತರಗಳನ್ನು ಗ್ರಹಿಸಿ ಅದಕ್ಕೆ ಪ್ರತಿಕ್ರಿಯಿಸುವ, ಪ್ರತಿರೋಧಿಸುವ ಪ್ರಯತ್ನವನ್ನು ಮಾಡುತ್ತದೆ. ಮತ್ತದು ಅನಿವಾರ್ಯವೂ ಕೂಡ ಹೌದು. ಹಾಗಾದಿ ಕಾದಂಬರಿಯು ವಸಾಹತುವಾದದ ಅನುಭವದೊಡನೆ ನೇರ ಸಂಬಂಧವನ್ನೇರ್ಪಡಸಿಕೊಂಡಿತು. ಇದರಿಂದಾಗಿ ಭಾರತೀಯರಿಗೆ ಕಾದಂಬರಿಯ ಮೂಲಕ ಆತ್ಮಪರೀಕ್ಷೆಯ ಅವಕಾಶಗಳನ್ನು ಒದಗಿಸಿ ಚಿಂತನೆಗೆ ಹಚ್ಚಲು ಕಾರಣವಾಯಿತು.

ಪ್ರಾರಂಭದ ಕಾದಂಬರಿಕಾರರು ತಮ್ಮ ಸಂಸ್ಕೃತಿ ಮತ್ತು ಸನಾತನ ಧರ್ಮದ ಮೌಲ್ಯಗಳನ್ನು ನಂಬಿದವರಾಗಿದ್ದರು, ಹಾಗಾಗಿ ಅವರು ಪಾಶ್ಚಾತ್ಯ ಸಂಸ್ಕೃತಿಗೆ ವಸಾಹತುಶಾಹಿಗೆ ಪ್ರತಿಕ್ರಿಯಿಸುವ ರೀತಿ ಭಿನ್ನವಾಗಿತ್ತು. ಅಂದರೆ ಭಾರತೀಯ ಪಾರಂಪರಿಕ ಮೌಲ್ಯಗಳನ್ನು ಎತ್ತಿಹಿಡಿಯುವ ಮೂಲಕ ವಸಾಹತುಶಾಹಿಯ ಅನುಭವವನ್ನು ತಿರಸ್ಕರಿಸುತ್ತಿದ್ದರು. ಉದಾಹರಣೆಗೆ 'ಗಳಗನಾಥ'ರ 'ಕುಮುದಿನಿ' ಮತ್ತು 'ಎಂ.ಎಸ್.ಪುಟ್ಟಣ್ಣ' ನವರ 'ಅವರಿಲ್ಲದೂಟ' ಈ ಎರಡೂ ಕಾದಂಬರಿಗಳು ಪಾತಿವ್ರತ್ಯ, ಸ್ವಾಮಿಭಕ್ತಿಗಳಂಥ ಪಾರಂಪರಿಕ ಮೌಲ್ಯಗಳನ್ನು ಎತ್ತಿಹಿಡಿಯುತ್ತವೆ. ಇದೇ ಸಾಂಸ್ಕೃತಿಕ ಸಂದರ್ಭದಲ್ಲಿ ಕಾದಂಬರಿಯನ್ನು ಬರೆದಂತ ಗುಲ್ವಾಡಿ ವೆಂಕಟರಾಯರು ತಮ್ಮ 'ಇಂದಿರಾಬಾಯಿ' ಕಾದಂಬರಿ ಮೂಲಕ ಸಮಾಜದ ಅನಿಷ್ಟವನ್ನು ವಿಡಂಬಿಸಿ ಅಲ್ಲಿನ ಸಾಂಸ್ಕೃತಿಕ ಜೀವನದಿಂದ ಹೊರಗೆ ನಿಂತು ನೋಡಲು ಶಕ್ತರಾದರು. ಕಾದಂಬರಿ ಕಾಲದ ಆರಂಭದಲ್ಲಿ ಲೇಖಕ ಇದ್ದ ಸಂದಿಗ್ಧ ಸ್ಥಿತಿಯನ್ನು ಮಾಸ್ತಿಯವರು "ಸ್ವತಂತ್ರ

ನಿರ್ಮಾಣದ ಪ್ರೇರಣೆ ಮರಳಿ ಮೂಡಿದ್ದು ನಮಗೆ ಆಂಗ್ಲ ಸಾಹಿತ್ಯದ ಪರಿಚಯ ದೊರೆತಾಗಲೇ. ಆದರೆ ಶಕ್ತಿ ಮೂಡುವ ಹೊತ್ತಿಗೆ ಸರಿಯಾಗಿ ನಮ್ಮಲ್ಲಿ ನಾವು ಬಂದು ಅಧೀನ ಜನಾಂಗವಾದ ಕಾರಣ ಎಲ್ಲದರಲ್ಲಿಯೂ ಅಧೀರರಾಗಿ ನಡೆದುಕೊಳ್ಳುವ ಮನೋಭಾವ ಬೆಳೆದು ಬಿಟ್ಟಿತ್ತು. ದೇಶದಲ್ಲಿ ಸ್ವಾತಂತ್ರ್ಯದ ಅಭಿಲಾಷೆ ರೂಪುಗೊಂಡಿದ್ದೇ, ನವೀನ ಸ್ವತಂತ್ರ ಸಾಹಿತ್ಯದ ನಿರ್ಮಾಣವೂ ಮೊದಲಾಯಿತು[೧]" ಎಂದಿದ್ದಾರೆ. ಅವರ ಮಾತಿನಂತೆಯೇ ಅವರ 'ಸುಬ್ಬಣ್ಣ' ಕಾದಂಬರಿಯು ತನ್ನ ಸ್ವರೂಪದ ಸಮಸ್ಯೆಗಳನ್ನು ಯಶಸ್ವಿಯಾಗಿ ಬಗೆಹರಿಸಿಕೊಂಡು ಪ್ರಬುದ್ಧಾವಸ್ಥೆಯನ್ನು ತಲುಪಿದ ಮೊದಲ ಕಾದಂಬರಿಯಾಯಿತು.

ಕಾದಂಬರಿ ಉಗಮದ ಕಾರಣಗಳನ್ನು ಕಂಡುಕೊಳ್ಳುವಲ್ಲಿ ನಡೆದ ಪ್ರಯತ್ನಗಳಿಗೆ ಸಂಬಂಧಿಸಿದಂತೆ ಡಿ.ಆರ್.ನಾಗರಾಜ್‌ರವರು ಎರಡು ಅಂಶಗಳನ್ನು ಎತ್ತಿಹಿಡಿಯುತ್ತಾರೆ.

"೧). ಪರಕೀಯ ಯಜಮಾನ ಸಂಸ್ಕೃತಿ ಮತ್ತು ದೇಸಿ ಸಂಸ್ಕೃತಿಗಳ ನಡುವಿನ ಮುಖಾಮುಖಿಯಲ್ಲಿ ಕಾದಂಬರಿ ಹುಟ್ಟುತ್ತದೆ.

೨). ದೇಸಿ ಮಧ್ಯಮ ವರ್ಗ ರೂಪುಗೊಂಡು ತನಗೊಂದು ಆಧುನಿಕ ಸಾಂಸ್ಕೃತಿಕ ವ್ಯಕ್ತಿತ್ವ ನಿರ್ಮಾಣ ಮಾಡಿಕೊಳ್ಳುವಾಗ ಉಂಟಾಗುವ ದ್ವಂದ್ವದಲ್ಲಿ ಕಾದಂಬರಿ ಹುಟ್ಟುತ್ತದೆ"[೨].

ಈ ೨ ಕಾರಣಗಳನ್ನು ಗ್ರಹಿಸಿದಂತೆ ಕನ್ನಡ ಕಾದಂಬರಿಯ ಉಗಮವು ಮೊದಲ ಅಂಶವನ್ನು ಆಧರಿಸಿದೆ ಎಂದು ಒಪ್ಪಿಕೊಳ್ಳಬಹುದಾಗಿದ್ದು, ಇದಕ್ಕೆ ಪುಷ್ಟಿ ನೀಡುವಂತ ವಸಾಹತು ಸಾಹಿಗೆ ಪ್ರತಿಕ್ರಿಯಿಸಿದ ನವೋದಯ ಕಥನ ಸಾಹಿತ್ಯವನ್ನು ಗಮನಿಸಬಹುದಾಗಿದೆ. ಭಾರತೀಯ ಧಾರ್ಮಿಕ, ವೈಚಾರಿಕ, ಸಾಹಿತ್ಯಿಕ ಪರಂಪರೆಗಳು ಬ್ರಿಟಿಷ್ ವಸಾಹತುಶಾಹಿ ಹಾಗೂ ಪಾಶ್ಚಿಮಾತ್ಯ ಸಮಾಜಗಳನ್ನು ತೀವ್ರವಾಗಿ ಪ್ರಭಾವಿಸಿದವು.

ಕುವೆಂಪು, ಮಾಸ್ತಿ, ಕಾರಂತರಂಥ ನವೋದಯ ಕಥನಕಾರರು ಹಿಂದಿನ ಸುಧಾರಣಾವಾದಿ ತತ್ವವನ್ನು ಮೀರಿ ನೇರವಾಗಿ ವಸಾಹತುಶಾಹಿಯ ನೆಲೆಗಳಾದ ಶಿಕ್ಷಣ, ಧರ್ಮ, ವೈಚಾರಿಕತೆ, ಆಧುನಿಕತೆ ಅಂಶಗಳಿಗೆ ಪ್ರತಿಕ್ರಿಯಿಸುವ ಧೋರಣೆಯನ್ನು ತಾಳಿದವು.

ಕುವೆಂಪುರವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಪ್ರಧಾನ ಚಿಂತನಧಾರೆಯೇ ವಸಾಹತುಶಾಹಿ ಮತ್ತು ಆ ಮೂಲಕ ಬಂದಂಥ ಆಧುನಿಕತೆ, ಧರ್ಮ ಹಾಗೂ ಇವುಗಳಿಗೆ ಸ್ಥಳೀಯ ಸಮಾಜ ತೋರಿದ ಪ್ರತಿಸ್ಪಂದನೆಯನ್ನು ಕಾಣುವುದೇ ಆಗಿದೆ. ಮತಾಂತರ, ಶಿಕ್ಷಣ, ಆಧುನಿಕ ಜೀವನ ಕ್ರಮಗಳು ಈ ಮೂರು ಮುಖ್ಯ ನೆಲೆಗಳ ಮೂಲಕ ವಸಾಹತುಶಾಹಿ ಪ್ರಕ್ರಿಯೆಗೆ ಕುವೆಂಪು ಪ್ರತಿಕ್ರಿಯಿಸಿದ್ದಾರೆ.

ಆಧುನಿಕತೆಯ ಪ್ರತಿರೂಪವಾದಂತ ಬೀಸೆಕಲ್ಲು ಪ್ರಸಂಗದಲ್ಲಿ ಗುತ್ತಿಯ ಕುತೂಹಲದ ಮಾತುಗಳು "ಬೆಟ್ಟಳ್ಳಿ ಹಕ್ಕಲಾಗೆ ಇವತ್ತು ಬೆಳಗಿನ ಹೊತ್ತು ತೀರ್ಥಹಳ್ಳಿ ಕಿಲಸ್ತರ ಪಾದ್ರಿ ಅದೇನೋ ಬೀಸೆಕಲ್ಲು ಸವಾರಿ ಮಾಡ್ತಾರಂತೆ. ನಮ್ಮ ಬೆಟ್ಟಳ್ಳಿ ಸಣ್ಣ ಗೌಡ್ರಿಗೂ ಸವಾರಿ ಕಲಿಸ್ತಾರಂತೆ ಎಲ್ಲರೂ ಹೋಗ್ತಿದಾರೆ ಅದನ್ನೋಡಾಕೆ"[3] ಈ ರೀತಿ ವ್ಯಕ್ತಿಪಡಿಸಿದರೆ ಸುಬ್ಬಣ್ಣ ಹೆಗ್ಗಡೆಯ ಮೂಲಕ ಪ್ರತಿಸ್ಪಂಧನದ ಮಾತುಗಳು "ಅಂತೂ ಆ ಪಾದ್ರಿಯಿಂದ ಸುಖಾ ಇಲ್ಲ ಅಂತ ಕಾಣ್ತದೆ, ಬೀಸೆಕಲ್ಲು ಸವಾರಿ, ಹೊಗೇಬತ್ತಿ ಸೇರೋದು, ಮುಂಜುಟ್ಟು ಬಿಡೋದು, ಇನ್ನೂ ಏನೇನೋ ಯಕ್ಷಿಣೆ ಮಾಡಿ, ಜಾತಿ ಕೆಡಿಸಿ, ಕಿಲಸ್ತರ ಮತಕ್ಕೆ ಸೇರಿಸಕ್ಕೆ ಹುನ್ನಾರು ಮಾಡ್ತಿದಾನೆ. ನಿನ್ನ ಬೆಟ್ಟಳ್ಳಿ ಸಣ್ಣಗೌಡರು ಅವನ ಬಲೆಗೆ ಬೀಳಾಹಂಗೆ ಕಾಣ್ತತೆ!"[4] ಎನ್ನುವ ಮಾತುಗಳು ಈ ಎಲ್ಲಾ ಆಧುನಿಕ ಅಂಶಗಳು ತಂತ್ರಗಾರಿಕೆಯೇನೋ ? ಎಂಬಂಥ ಗುಮಾನಿ ಕಾಣುತ್ತಿದೆ.

"ಇದ್ದಲಿನಷ್ಟು ಕರ್‍ರಗಿದ್ದ ಪಾದ್ರಿ ಮಲ್ಲಿಗೆ ಹೂವಿನಂಥ ಬಿಳಿಯ ಬಟ್ಟೆಗಳನ್ನು ಧರಿಸಿದ್ದನು. ಒಂದು ಅಂಚಿಲ್ಲದ ಬಿಳಿಯ ರುಮಾಲು ತಲೆಯನ್ನಲಂಕರಿಸಿತ್ತು. ಗುಂಡಿ ಹಾಕದೆ ತೆರೆದಿದ್ದ ಬಿಳಿಯ ಕೋಟಿನ ಒಳಗೆ ಧರಿಸಿದ್ದ ಶರಟಿನ ಗುಂಡಿಗಳು ಬಿಸಿಲಿಗೆ ಹೊಳೆಯುತ್ತಿದ್ದವು. ಉತ್ತರೀಯವೊಂದು, ಅದೂ ಬಿಳಿಯದೆ, ಕೊರಳನ್ನು ಸುತ್ತಿ ಚಿನ್ನ ಮೇಲೊಂದು ತುದಿಯಾಗಿಯೂ ಎದೆಯ ಮೇಲೊಂದು ತುದಿಯಾಗಿಯೂ ಮೆರೆಯುತ್ತಿತ್ತು. ಹಳ್ಳಿಗರ ಬೆರಗಿಗೆ ಕಾರಣವಾಗಿದ್ದ ಗಡಿಯಾರದ ಸರಪಣಿ ಕೋಟಿನ ಗಡಿಯಾರದ ಜೇಬಿನಿಂದ ಇಳಿಬಿದ್ದಿತ್ತು. ಒಂದು ತೆಳ್ಳನೆಯ ಬಿಳಿಯ ಪಂಚೆಯನ್ನು ಕಚ್ಚೆ ಹಾಕಿ ಉಟ್ಟಿದ್ದನು. ಮೆಟ್ಟುಗಳನ್ನೆ, ಅಪರೂಪವಾಗಿ, ಯಜಮಾನ ಗೌಡರುಗಳ ಕಾಲಿನಲ್ಲಿ ಮಾತ್ರ ನೋಡುತ್ತಿದ್ದ ಹಳ್ಳಿಗರ ಕುತೂಹಲ ಗೌರವಕ್ಕೆ ತಿರುಗುವಂತೆ ಕಾಲಿಗೆ ಬೂಟೀಸು ಹಾಕಿದ್ದನು. ತೆಳಗೆ ಎತ್ತರವಾಗಿದ್ದ ಆ ವ್ಯಕ್ತಿಯನ್ನು ನೋಡಿ, ಅವನ

ಹಾವಳಿ ಇವುಗಳಿಂದ ಅವನ ವಿಚಾರದಲ್ಲಿ ಅತ್ಯಂತ ತಿರಸ್ಕಾರದ ಭಾವನೆ ಇದ್ದವರೂ ಕೂಡ ತುಸು ಹೆಡೆ ಮುಚ್ಚುವಂತಾದರು"[೫]. ಈ ಪಾತ್ರ ವಿವರಣೆಯು ಇಡೀ ಕಾದಂಬರಿಯಲ್ಲಿ ಮತಾಂತರದ ಪ್ರಕ್ರಿಯೆಗೆ ಕಾರಣ ಕರ್ತನಾದ ಕ್ರಿಶ್ಚಿಯನ್ ಧರ್ಮದ ಪ್ರತಿನಿಧಿ ಪಾದ್ರಿ ಜೀವನ ರತ್ನಯ್ಯನದು. ಆಧುನಿಕತೆಯೂ ಕೂಡ ಮತಾಂತರ ತಂತ್ರದ ಒಂದು ಭಾಗವಾಗಿ ಇಲ್ಲಿ ಗಮನಿಸಬಹುದು. ಇದಕ್ಕೆ ಪೂರಕ ಪರಿಸ್ಥಿತಿ ಎಂಬಂತೆ ಸ್ಥಳೀಯ ಮಠಗಳ, ಗುರುಪೀಠಗಳ ವಾಸ್ತವವನ್ನು ದಾಖಲಿಸುತ್ತಾರೆ.

"ಅಜ್ಞರೂ ಮೌಢ್ಯಾಂಧರೂ ಆಗಿದ್ದ ಶೂದ್ರವರ್ಗದ ಸಾಮಾನ್ಯ ಜನರಿಂದ ಪಾದ ಪೂಜೆ ಮಾಡಿಸಿಕೊಳ್ಳುತ್ತಿದ್ದರು; ಅಡ್ಡಪಲ್ಲಕ್ಕಿ ಸೇವೆ ಸಲ್ಲಿಸಿಕೊಳ್ಳುತ್ತಿದ್ದರು; ದಾನ, ದಕ್ಷಿಣೆ, ಸಾಷ್ಟಾಂಗ ನಮಸ್ಕಾರಗಳನ್ನು ಸ್ವೀಕರಿಸುತ್ತಿದ್ದರು. ಆಶೀರ್ವಾದ ಮಾಡುತ್ತಿದ್ದರು! ತಮ್ಮ ತಮ್ಮ ಪಂಗಡಕ್ಕೆ ಸೇರಿದ ಬ್ರಾಹ್ಮಣೋತ್ತಮರಿಗೆ, ಭೂಸುರರಿಗೆ, ಸಮಾರಾಧನೆ ಮಾಡಿಸಿ ಹೊಟ್ಟೆ ತುಂಬಿಸುತ್ತಿದ್ದರು. ಬಹುಶಃ ಶಾಸ್ತ್ರಕ್ಕಾಗಿ, ತಮ್ಮ ವರ್ಗಕ್ಕೆ ಸೇರಿದ ವಿದ್ವಾಂಸರನ್ನು ನೆರಪಿ ವಾಕ್ಯಾರ್ಥ ಏರ್ಪಡಿಸುತ್ತಿದ್ದರೂ ಇರಬಹುದು. ಶೂದ್ರರು ವೇದೋಪನಿಷತ್ತುಗಳನ್ನು ಓದುವುದಿರಲಿ, ಕೇಳಿದರೂ ಅವರ ಕಿವಿಗೆ ಸೀಸ ಕರಗಿಸಿ ಹೊಯ್ಯುವ ನರಕ ಶಿಕ್ಷೆಯನ್ನು ವಿಧಿಸಿ, ಅದಕ್ಕೆ ಧರ್ಮಶಾಸ್ತ್ರವೆಂದು ಹೆಸರಿಟ್ಟರು. ಶೂದ್ರರಿಗೆ ವೇದಾಂತ ಬೋಧನೆ ಮಾಡುವ ಪಾಪಕ್ಕೆ ಏಕೆ ಪಕ್ಕಾಗುತ್ತಾರೆ?

ಕಾವಲಿಲ್ಲದ ಕೋಟೆಗೆ ನುಗ್ಗಲು ಶತ್ರುವಿಗೆ ಸೈನ್ಯಬೇಕೆ ? ರಕ್ಷಕರಿಲ್ಲದ ದುರ್ಗವನ್ನು ಗೆಲ್ಲಲು ನಿಪುಣ ಸೈನಿಕನೊಬ್ಬನಾದರೂ ಸಾಕು ! ತಮ್ಮ ಧರ್ಮದ ವಿಚಾರವಾದ ಯಾವ ಬುದ್ಧಿಪೂರ್ವಕ ಜ್ಞಾನವೂ ಇಲ್ಲದೆ, ಪರಂಪಾರಗತವಾದ ಅಂಧ ಆಚಾರ ಸಮೂಹಗಳನ್ನೇ ತತ್ವಗಳೆಂದು ನಂಬಿ, ಆಲೋಚನಾ ಶಕ್ತಿ ಲವಲೇಶವೂ ಇಲ್ಲದಿದ್ದವರನ್ನು ಜಡಬುದ್ಧಿಗಳನ್ನು, ಮತಾಂತರಗೊಳಿಸುವುದು ಸುಲಭವಲ್ಲ; ಆದರೆ ಜಡಬುದ್ಧಗಳಾಗದೆ ತುಸುಮಟ್ಟಿಗೆ ಜಾಗೃತಮತಿಗಳಾಗಿಯೂ ತಮ್ಮ ಮತಧರ್ಮದ ಸನಾತನ ಮೂಲ ತತ್ವಗಳನ್ನರಿಯದವರ ನಂಬಿಕೆಗಳನ್ನು ಅಲ್ಲಾಡಿಸುವುದು ಅಷ್ಟೇನು ಕಷ್ಟವಲ್ಲ, ಪಾದ್ರಿ ಜೀವರತ್ನಯ್ಯ ಮಲೆನಾಡಿನ ಗೌಡರುಗಳಲ್ಲಿ ಅಂಥವರನ್ನೇ ಪತ್ತೆ ಹಚ್ಚಿ ತನ್ನ ಕೆಲಸಕ್ಕೆ ಕೈಹಾಕಿದ್ದನು. ಸಿಂಧುವಳ್ಳಿ ಚಿನ್ನಪ್ಪನೆ ಪಾದ್ರಿಯ ಮೊತ್ತಮೊದಲನೆಯ ಬೇಟೆಯಾಗಿದ್ದನು" [೬] ಹಿಂದೂ ಧರ್ಮದ ತಾರತಮ್ಯ ಶೋಷಿತ ವರ್ತನೆಗಳನ್ನು ಇಲ್ಲಿ ಉದ್ದರಿಸುತ್ತಾರೆ. ಇಲ್ಲಿನ ಪರಿಸ್ಥಿತಿಯ ಅನುಕೂಲತೆಗಳನ್ನು ಪಡೆದ ಜೀವನರತ್ನಯ್ಯ

ಮತಾಂತರಕ್ಕೆ ತಂತ್ರಗಳನ್ನು ರೂಪಿಸುತ್ತಾನೆ. "ಹಕ್ಕಲಿನ ಅಂಚಿನಲ್ಲಿ ಸುತ್ತಿದ್ದ ಅಡವಿಗೆ ಒತ್ತಿ ನಿಂತಿದ್ದ ಜನ ಸಮೂಹ, ಸುತ್ತ ನಾಲ್ಕು ದಿಕ್ಕಿನಿಂದಲೂ, ಪಾದ್ರಿ ಹಿಡಿದಿದ್ದ ಬೈಸಿಕಲ್ಲಿನ ಬಳಿಗೆ ನುಗ್ಗಿತು. ಆ ನೂಕು ನುಗ್ಗಲಿನಲ್ಲಿ ಮುಟ್ಟಬಹುದಾದವರು, ಮುಟ್ಟಬಾರವರು ಎಂಬ ಭೇದಭಾವಕ್ಕೆ ರಿಯಾಯಿತಿ ಒದಗಿದಂತಾಗಿ, ಪಾದ್ರಿಯ ವೃತ್ತಿಬುದ್ಧಿ ತನಗೆ ತಾನೆ ಹೇಳಿಕೊಂಡಿತು; ಮತಪ್ರಚಾರಕ್ಕೆ ಬೈಬಲ್ಲು ಏಸುಕ್ರಿಸ್ತನಿಗಿಂತಲೂ ಬೈಸಿಕಲ್ಲೇ ಹೆಚ್ಚು ಪ್ರಭಾವಶಾಲಿ!"[೭]

ಇಂಥ ಪಾದ್ರಿ ಮತ್ತು ಅವನ ತಂತ್ರಗಳಿಗೆ ಕಾದಂಬರಿಯ ಸ್ತ್ರೀ ಸಮೂಹ ಪ್ರತಿಕ್ರಿಯಿಸುವ ರೀತಿ "ಇಸ್ಸಿ ! ಥೂ! ಹೊಲೇರಿಗಿಂತಾ ಅತ್ತತ್ತ ಆ ಕ್ರಿಸ್ತರು ! ನಮ್ಮ ಮುಕುಂದ ಹೇಳ್ತಿದ್ದ, 'ಬೆಟ್ಟಳ್ಳಿ ಬಾವ ಆ ಪ್ರಾದ್ರೀನೆ ದೊಡ್ಡ ಪಂಡಿತ ಅಂತ ತಿಳುಕೊಂಡಿದಾನೆ. ಕಲ್ಲೂರು ಗಣಪತಿ ದೇವಸ್ಥನದ ಹತ್ರ ಹೊಳೇದಂಡೆ ಮಂಟ ಪದಾಗೆ ಒಬ್ಬ ಗಡ್ಡದಯ್ಯ ಬಂದಿದಾನಂತೆ, ಈ ಪರ್ಪಂಚದಾಗೆ ಇರೋದೆಲ್ಲ ಅವನಿಗೆ ಗೊತ್ತಂತೆ. ಅವನ ಮುಂದೆ ಈ ಪಾದ್ರಿ ಸಿಂಹದ ಮುಂದೆ ಸಿಂಗಳೀಕ ! ನಮ್ಮ ಬಾವ ಒಂದು ಸಾರಿ ಹೋಗಿ ಅವನ ಹತ್ರ ಮಾತಾಡಿ ಬರ್ಲಿ, ಗೊತ್ತಾಗ್ತದೆ, ಅಂತಾ"[೮].

ಹೊಸದಾಗಿ ಪ್ರಾರಂಭವಾಗುತ್ತಿದ್ದ ಮಿಷನ್ ಸ್ಕೂಲನ್ನು ಕುರಿತು "ಆಗತಾನೆ ಹಳೆಯ ತರಹದ ಕೂಲಿಮಠಗಳ ಕಾಲವೂ ಹಳೆಯ ವಿದ್ಯಾಭ್ಯಾಸ ಪದ್ಧತಿಯೂ ಮುಕ್ತಾಯಗೊಂಡು, ಆಂಗ್ಲೇಯರ ಆಡಳಿತದ ರೀತಿಯೂ ಇಂಗ್ಲೀಷಿನ ಪ್ರಭಾವವೂ ಮಳೆದೋರುತ್ತಿದ್ದ ಸಂಧಿಸಮಯ. ಮಲೆನಾಡಿನ ಆ ಹೊಸ ಪ್ರಭಾವದ ಮುಂಬೆಳಕನ್ನು ಮೊತ್ತಮೊದಲು ತರುವುದರಲ್ಲಿ ಕ್ರೈಸ್ತಪಾದ್ರಿಗಳ ಕಾರ್ಯ ಗಣನೀಯವಾಗಿತ್ತು, ಶ್ಲಾಘನೀಯವಾಗಿತ್ತು"[೯] ಎನ್ನುವಲ್ಲಿ ಸುಧಾರಣಾವಾದಿ ಮನೋಭಾವ ತೋರುತ್ತಾರೆ.

ಆಧುನಿಕತೆ ಮತ್ತು ಪರಾಂಪರಾಗತ ಸಾಮಾಜಿಕ ವ್ಯವಸ್ಥೆಗಳು ಮುಖಾಮುಖಿಯಾದಾಗ ಪಲ್ಲಟಿಸುವ ರೀತಿ, ಕ್ರಮಗಳನ್ನು ಕಾರಂತರ ಕಾದಂಬರಿಗಳ ಗುರುತಿಸಬಹುದು. ಅವರ 'ಮೈಮನಗಳ ಸುಳಿಯಲ್ಲಿ' ಕಾದಂಬರಿಯು ವಸುಪುರದ ಸಾಮಾಜಿಕ ಬದಲಾವಣೆಗೆ ಸಂಬಂಧಿಸಿದಂತೆ "ಅಂತು ಚಾರಿತ್ರಿಕವಾಗಿ ಈ ಮೂರು ಬಿಳಿ ಜನರಿಂದ ಆಮದು ಮಾಡಿಕೊಂಡ ಸರಕುಗಳಲ್ಲಿ ಒಂದು ವಸ್ತು 'ಫರಂಗಿ'

ರೋಗವಾಗಿತ್ತು. ಇಂದು ಬಿಳಿಯರಿಲ್ಲ. ಅವರ ಹಡಗುಗಳು ಈ ಊರಿನ ಹತ್ತಿರ ಸುಳಿಯುವುದಿಲ್ಲ. ಆದರೆ ಒಂದು ಕಾಲದಲ್ಲಿ ಆ ಬಿಳಿಯ ಮೂತಿಗಳು ಸ್ಥಳೀಯ ವಿಲಾಸಿಗಳ ಪಾಲಿಗೆ ಸ್ಪರ್ಧಾಳುಗಳಾಗಿದ್ದರು"[೧೦].

ಭೂಮಿ ಒಡೆತನದ ಆಸೆ ಪಟ್ಟ 'ಚೋಮನದುಡಿ'ಯ ಚೋಮನ ಪರವಾಗಿ ಕಾರಂತರು "ಇನ್ನೊಂದು ಬಯಕೆಯೂ ಅವನದ್ದಿದೆ. ತಾನು ನೆಲವನ್ನು ಉತ್ತು ಬಿತ್ತಬೇಕೆಂದು, ಬೇಸಾಯಗಾರನಾಗಬೇಕೆಂಬ ಬಯಕೆ ಕುತ್ತಿಗೆವರೆಗಿದೆ. ಆದರೆ ಅವನ ಊರಿನಲ್ಲಿ ಹೊಲೆಯ ಬೇಸಾಯಗಾರನೆಂಬ ಜಾತಿಯೇ ಇಲ್ಲ. ಹಾಗಾಗುವ ಆಸೆ ಹಿಡಿದು, 'ಯಾರನ್ನಾದರೂ, ಯಾರು, ಏನೆಂದರೂ ಸಂಕಪಯ್ಯನವರನ್ನು "ನಾಲ್ಕು ಗೇಣು ಜಾಗ ನನಗೆ ಗೇಣಿಗೆ ಕೊಡಿರಿ' ಎಂದು ಕೇಳುವ ಸಾಹಸ ಬರದು. ಆದರೆ ಒಂದಲ್ಲ ಒಂದು ದಿನ ನೇಗಿಲನ್ನು ಹಿಡಿದು ಮೆರೆದೇನೆಂಬ ಆಸೆಯಿದೆ. ಆದ್ದರಿಂದಲೇ ಮೂರು ವರ್ಷಗಳಿಂದ ಎರಡು ಹಸುವಿನ ಕರುಗಳನ್ನು ಸಾಕುತ್ತಾ ಬಂದಿದ್ದಾನೆ. ಈಗ ಅವಕ್ಕೆ ಮೂರು ವರ್ಷಗಳ ಪ್ರಾಯವಿರಬಹುದು. ನೇಗಿಲನ್ನು ಹೊರುವ ಯೋಗ್ಯತೆ ಬಂದಿದೆ. ಈಗಾಗಲೇ ಊರಿನ ಮಾಪಿಳ್ಳೆ ಸಾಹುಕಾರನೊಬ್ಬ ಆದಾವೃತ್ತಿ ಅವನಲ್ಲಿಗೆ ಬಂದು, "ನಿನಗೇಕೆ ಚೋಮ ಇವು? ಈ ಕರುಗಳನ್ನು ನನಗೆ ಕೊಡು, ಹತ್ತು ರೂಪಾಯಿ ನಗದಿ ಕೊಡುತ್ತೇನೆ" ಎಂದು ಹೋಗಿದ್ದ ಹತ್ತು ರೂಪಾಯಿಯ ಗಂಡು ಎಂಥವರಿಗೂ ಬಾಯಿ ನೀರು ತರಿಸಬೇಕು. ಆದರೆ ಚೋಮ ಗಟ್ಟಿಯಾಗಿ ಕೂತ್ತಿದ್ದಾನೆ; ಹತ್ತಲ್ಲ, ನೂರು ಕೊಟ್ಟರೂ ಮಾರುವುದಿಲ್ಲವಂತೆ"[೧೧] ಎಂಬ ಮಾತುಗಳನ್ನು ಆಡುತ್ತಾರೆ. ಆದರೆ ಅವನಾಸೆ ಕೈಗೂಡುವ ಅವಕಾಶಗಳೇ ಇಲ್ಲದಾಗ ತನ್ನ ಮಗ ಕ್ರಿಶ್ಚಿಯಾನಿಟಿಗೆ ಮತಾಂತರಗೊಂಡು ಭೂ ಒಡೆಯನಾಗಿದ್ದಾಗ ಚೋಮ "ಗದ್ದೆ ಸಾಗುವಳಿಯೇ ? ಯಾರು ಗುರವನೇ ? ಜಾತಿಗೆಟ್ಟರೂ ಸ್ವರ್ಗ ಸಿಕ್ಕಿತಲ್ಲ !" ಎನ್ನುವ ಚೋಮನಲ್ಲಿ ಜಾತಿ ಕೆಡುವ ಭಯ, ಆತಂಕ ಮತ್ತು ಸ್ವಾಭಿಮಾನ ಯಾವತ್ತು ಇದೆ. ಸಂಕಪಯ್ಯ ಮತ್ತು ಅವನ ತಾಯಿಯಲ್ಲಿ ಇದೇ ಮನಸ್ಥಿತಿ ಇನ್ನೊಂದು ಸ್ವರೂಪದಲ್ಲಿದೆ. ಅಷ್ಟೇಕೆ, ಪಾದ್ರಿ ಸಾಹೇಬರು ಜಾತಿ ಚೌಕಟ್ಟಿನ ಆಚೆ ಯೋಚನೆ ಮಾಡಲಾರರು ! ಹೊಸ ಬದುಕಿಗೆ ತೆರೆದುಕೊಂಡು ಹೊಸ ಆಶೋತ್ತರಗಳನ್ನು ಬೆಳೆಸಿಕೊಳ್ಳುವ ಬೆಳ್ಳಿ ಮಾತ್ರ ಬದಲಾವಣೆ ತರಬಹುದಾದ ಸಾಧ್ಯತೆಗಳನ್ನು ನಿರೀಕ್ಷಿಸಬಲ್ಲಳು: "ಇತ್ತ ಅವಳ ಮನಸ್ಸು ಸಹ ಗುರುವನ್ನು ಕಾಣಲು ಹಂಬಲಿಸುತ್ತಿತ್ತು. ಅವನಾದರೂ ಬಳಿಯಲ್ಲಿರುತ್ತಿದ್ದರೆ ಸತ್ತವರ ಸ್ಥಾನವನ್ನು ತುಂಬುತ್ತಿದ್ದ. ತಂದೆಯ

ಮುಪ್ಪಿನಲ್ಲಿ ನೆರವಾಗುತ್ತಿದ್ದ ಎಂದು ಯೋಚಿಸತೊಡಗಿದಳು. ಆದರೆ ಕ್ರಿಶ್ಚಿಯನ್‌ನಾದ ಅವನನ್ನು ತಿರುಗಿ ನಾವು ಸೇರಲು ಅವನಂತೆ ಕ್ರಿಶ್ಚಿಯನರಾಗಬೇಕಾಗುತ್ತದೆ. ತಮಗಿನ್ನು ಯಾವ ದೇವರಾದರೇನು ಎಂದೂ ತೋರಿತು. ಮರುಕ್ಷಣ ಹಾಳು ಮಸ್ಕ್ವೀಲನ ಹಂಬಲವೂ ಬಂದಿತು. ಅವಳ ವಿಲಾಸಿ ಜೀವನದ ಆಸೆಯು ತಿರುಗಿ ಮೊಳೆಯಿತು. ಒಮ್ಮೆಮ್ಮೆ ತನ್ನ ಮನಸ್ಸಿನಲ್ಲಿ ತಾನು ಮಸ್ಕ್ವೀಲನ ಮಡದಿಯಾಗುವೆನೆಂದು ಚಿತ್ರಿಸಿಕೊಂಡಳು. ಗುರುವನು ಮೇರಿಯ ಪತಿಯಾಗಲಿಲ್ಲವೇ?"[೧೨] ಎನ್ನುವ ದ್ವಂದ್ವಗಳು, ಹೊಸ ಆಲೋಚನೆಗಳು ಉಂಟಾಗುವುದು ಲೇಖಕನ ಆಧುನಿಕ ಮನಸ್ಸಿನ ಪ್ರತಿರೂಪ ಎನ್ನಬಹುದಾಗಿದೆ. ಗುರುವ, ಚೋಮ, ಬೆಳ್ಳಿ, ಸಂಕಪಯ್ಯ, ಮಸ್ಕ್ವೀಲರ ಗೊಂದಲಗಳ ಮೂಲಕ ಕಾರಂತರು ಆಧುನೀಕರಣದ ಪ್ರಕ್ರಿಯೆಯ ಸಂಕೀರ್ಣತೆಯ ಚಿತ್ರಣ ಕಾಣುತ್ತದೆ. ಇಂಥ ಚಿತ್ರಗಳನ್ನು ಕಾರಂತರ ಇತರ ಕಾದಂಬರಿಗಳಾದಂಥ 'ಮೂಕಜ್ಜಿಯ ಕನಸುಗಳು', 'ಮರಳಿ ಮಣ್ಣಿಗೆ' ಯಲ್ಲೂ ನೋಡಬಹುದಾಗಿದೆ.

ನಗರೀಕರಣದ ಪ್ರಭಾವ ಮತ್ತು ಪರಿಣಾಮಗಳು 'ಮರಳಿ ಮಣ್ಣಿಗೆ' ಕೃತಿಯಲ್ಲಿ ಪ್ರವೇಶಿಸಿದೆ. ಶೀನಮಯ್ಯ-ರಾಮ ಐತಾಳರಲ್ಲಿ ನಡೆದ ಸಂಭಾಷನೆ "ಐತಾಳರೇ, ಏನೆನ್ನುತ್ತೀರಿ? ನಮ್ಮ ಮಾಣಿಯನ್ನು, ನರಸಿಂಹನನ್ನು ಬೆಂಗಳೂರಿಗೆ ಕಳುಹಿಸುವ ಎಂದು ಮಾಡಿದ್ದೇನೆ. ಅಲ್ಲಿ ನಮ್ಮ ಹೇರ್ಳೆಯವರ ಹೋಟೆಲಿದೆಯಂತಲ್ಲ. ಒಂದೊಂದು ವರಹ ತಿಂಗಳಿಗೆ ಕೈಮೆಲೆ ಹಾಕುವ ಎಂದಿದ್ದಾರೆ. ಒಂದಿಷ್ಟು ಸಾಲವೂ ಉಂಟು..... 'ನಿನಗೆ ಮರಳು ಶೀನ' ಯಾವಾವ ಜಾತಿಯವರು ತಿಂದು ಬಿಟ್ಟ ಎಂಜಲನ್ನು ತೆಗೆಯಲಿಕ್ಕೆ ದೇವರು ನಮಗೆ ಬ್ರಾಹ್ಮಣ ಜನ್ಮ ಕೊಟ್ಟದ್ದೇನು ? ಹೇರ್ಳೆಯರಿಗೇನು ! ಅನ್ನವನ್ನು ಮಾರಿ ಹಣ ಸಂಪಾದಿಸಿದರೂ ಚಿಂತೆಯಿಲ್ಲ, ಒಟ್ಟಿನಿಂದ ಮನೆಗೆ ಉಪ್ಪರಿಗೆ ಬಿದ್ದರಾಯಿತು......

'ಐತಾಳರೇ, ಹೇರ್ಳೆಯವರ ಹೋಟೆಲು ಬೆಂಗಳೂರಿಗೇನೆ ಭಾರಿ ಹೆಸರಾದ ಹೋಟೆಲು, ತಿರುಪತಿಗೆ ಹೋದವರು ಅಲ್ಲಿ ಹೊಕ್ಕು ಬಂದವರು ಹೇಳುತ್ತಾರೆ. ಬೆಂಗಳೂರು ಸಿಟಿಯಲ್ಲೇ ಅಂಥಾ ಮರ್ಯಾದೆಯಂತೆ ಅವರಿಗೆ. ಅಲ್ಲದೆ ಅಲ್ಲಿ ಬ್ರಾಹ್ಮಣರಿಗೆ ಮಾತ್ರ ಊಟವಂತೆ ! ನೀವೇ ಹೇಳಿ ಮನೆಯಲ್ಲಿ ಕುಳಿತರೆ, ಹೊಟ್ಟೆ ತುಂಬಿತೆ ? ಬರಿ ಎಂಟುಮುಡಿ ಗದ್ದೆ ಇರುವುದು ನನಗೆ ಅದರಲ್ಲಿ ಬೆಳೆದರೆ ಏನು

ಬಂದೀತು?"[೧೩] ಇಲ್ಲಿ ನಗರದ ಆಕರ್ಷಣೆ ಮತ್ತು ಹಳ್ಳಿಯ ವಿಕರ್ಷಣೆಗಳನ್ನು ಕಾಣಬಹುದು.

ಆಧುನಿಕ ಶಿಕ್ಷಣದ ಜೊತೆಗೆ ಸಾಮಾಜಿಕ-ಸಾಂಸ್ಕೃತಿಕ ಬದಲಾವಣೆಯ ಕುರುಹುಗಳು "ಸರಕಾರಕ್ಕೆ ಯಾವ ಮಣ್ಣಿನ ಲೆಕ್ಕವೂ ಇಲ್ಲ, ಕಾರ್ಕಡದಲ್ಲಿ ಒಂದು ಶಾಲೆಯಿದೆ. ಯಾವ ವಾರ ಯಾವ ತಿಥಿಯದರೂ ಮಕ್ಕಳೂ ಅಲ್ಲಿಗೆ ಬರಬಹುದು.... ಅಲ್ಲಿ ಎಲ್ಲ ಸಕ್ಕೋಟು ಒಂದು. ಗಾಣಿಗರ ಮಕ್ಕಳು, ಬ್ರಾಹ್ಮಣರ ಮಕ್ಕಳು, ಸಾಲಾ ಸಾಲು ಬೆಂಚು ಮೇಲೆ ಒಟ್ಟಿಗೆ ಒರಗಿರುತ್ತವೆ!.... ಸರಕಾರಿ ಲೆಕ್ಕವೇ ಹಾಗೆ ! ನನ್ನ ಮಠದಲ್ಲಿ ನಾನು ಬ್ರಾಹ್ಮಣರನ್ನು ಬಿಟ್ಟು ಇನ್ನೊಂದು ಹುಳವನ್ನು ಬರಲಿಕ್ಕೆ ಬಿಡಲಿಕ್ಕಿಲ್ಲ... 'ಸರಕಾರದವರು ಇದೇ ರೀತಿ ಇನ್ನೂ ಹತ್ತು ವರ್ಷ ನಡೆಸಿದ್ದಾದರೆ, ನಾಳೆ ನೇಗಿಲು ನೊಗ ಹಿಡಿಯಲಿಕ್ಕೆ ಕೆಳಗಿನವರು ಯಾರ್‍ಯಾರು ಬರಲಾರರು; ಆ ಮೇಲೆ ಬ್ರಾಹ್ಮಣರೇ ಹೂಡಲಿಕ್ಕೆ ಹೊರಟರಾಯಿತು"[೧೪] ಈ ಸಂಭಾಷಣೆಯಲ್ಲಿ ಕಾಣಸಿಗುತ್ತವೆ.

ಮಾಸ್ತಿಯವರ 'ಚಿಕ್ಕವೀರ ರಾಜೇಂದ್ರ' ಕೃತಿಯು ಚಿಕ್ಕವೀರನ ವಿಕೃತಿ ಮತ್ತು ವಿಶಿಷ್ಟ ಸಾಮುದಾಯಿಕ ಗುಣ ಹೊಂದಿದ್ದು, ಈ ಸಮುದಾಯದ ಗುಣವಿಶೇಷಗಳಿಗೆ ಹೊರತಾದ ನಯಗಾರಿಕೆಯ ಮೂಲಕ ವಸಾಹತುಶಾಹಿ ಕೊಡಗನ್ನು ಗೆಲ್ಲುತ್ತದೆ. ಮಾಸ್ತಿ ಇಲ್ಲಿ ಭಾರತದ ರಾಜ ಪ್ರಭುತ್ವದೊಳಗಿನ ಅರಾಜಕ ಸ್ಥಿತಿಗತಿಗಳನ್ನು ವಸಾಹತುಶಾಹಿಯು ಬಂಡವಾಳವಾಗಿಸಿಕೊಳ್ಳುವ ತಂತ್ರಗಾರಿಕೆಯನ್ನು ಮುಖಾಮುಖಿಯಾಗಿಸುತ್ತಾರೆ.

ಕುವೆಂಪುರವರ 'ಕಾನೂರು ಹೆಗ್ಗಡತಿ' ಯಲ್ಲಿನ ಹೂವಯ್ಯ ರಾಷ್ಟ್ರೀಯತೆಯನ್ನು ಪ್ರತಿನಿಧಿಸುವ ಪಾತ್ರವಾಗಿದೆ. ಆತನ ಸುಧಾರಣಾವಾದಿ, ವೈಚಾರಿಕ ಮನೋಭಾವ, ವಿವೇಕಾನಂದರ ಪ್ರಭಾವ, ಸಾಂಪ್ರದಾಯಿಕತೆಯ ವಿಡಂಬನೆ, ಪರಂಪರೆ ಪುನರ್ ಮೌಲ್ಯೀಕರಣಗಳನ್ನು ಕಾಣಬಹುದು.

ಮಾಸ್ತಿಯವರ 'ಜ್ಯೋಗ್ಯೋರ ಅಂಜಪ್ಪನ ಕೋಳಿಕತೆ"ಯು ನಿರಪರಾಧಿಗೆ ಶಿಕ್ಷಿಸುವ ಕೋರ್ಟಿನ ವ್ಯವಸ್ಥೆಯನ್ನು, ಸಾಕ್ಷಿಯನ್ನೇ ಕೇಂದ್ರವಾಗಿಟ್ಟುಕೊಂಡು, ಸತ್ಯವನ್ನು ಮರೆಮಾಚುವ ತಂತ್ರಗಾರಿಕೆ ವ್ಯವಸ್ಥೆಯನ್ನು ದಾಖಲಿಸುತ್ತದೆ. ಇಲ್ಲಿ ಮಾಸ್ತಿ ಸತ್ಯ

ಪ್ರತಿಪಾದನೆಯ ಅಂಶಗಳು ಸ್ಥಳೀಯ ಸಂಸ್ಕೃತಿಗಳೊಳಗೆ ವಸಾಹತುಶಾಹಿಗಿಂತ ಅಥೆಂಟಿಕ್ ಆಗಿದ್ದಂತಹ ರೂಪಕಗಳನ್ನು ಸೃಷ್ಟಿಸುತ್ತಾರೆ. ಮಾಸ್ತಿಯವರ ಕಥನ ಸಾಹಿತ್ಯ ವಸಾಹತುಶಾಹಿಗೆ ಪ್ರತಿಕ್ರಿಯಿಸುವಾಗ ಸ್ಥಳೀಯ ಸಾಂಸ್ಕೃತಿಕ ಪರಂಪರೆಯಲ್ಲಿ ಅಂತರ್ಗತವಾಗಿದ್ದ ಸತ್ಯ ಮತ್ತು ಮಾನವೀಯತೆಯ ರೂಪಕಗಳನ್ನು ನೋಡಬಹುದು.

ಪ್ರಾಚೀನ ಮತ್ತು ನವೀನತೆಗಳ ಸಂಘರ್ಷದ ಸ್ವರೂಪವನ್ನು ಮಲೆನಾಡಿನ ಜೀವನದ ನೆಲೆಯಲ್ಲಿ ಗುರ್ತಿಸುತ್ತಾ ಕುವೆಂಪು "ಆ ನಾಡಿನ ಒಕ್ಕಲರಲ್ಲಿ ಬಹು ಪುರಾತನದಿಂದಲೂ ಹೆಂಡ, ಕಳ್ಳು ಮೊದಲಾದ ಮಾದಕ ಪದಾರ್ಥಗಳನ್ನು ಸೇವಿಸುವುದು ಅತಿ ಸಾಮಾನ್ಯವಾದ ರೂಢಿಯಾಗಿತ್ತು. ಈಗಲೂ ಅದು ಸಂಪೂರ್ಣವಾಗಿ ತೊಲಗಿಲ್ಲ, ಮೊದಲು ಎಲ್ಲೆಲ್ಲಿಯೂ ಬಹಿರಂಗವಾಗಿ ನಡೆಯುತ್ತಿದ್ದುದು ಈಗ ಅಲ್ಲಲ್ಲಿ ಅಂತರಂಗವಾಗಿ ಸಾಗುತ್ತಿದೆ. ಅಂತೂ ಮಧ್ಯಪಾನ ಮಾಡುವುದು ನಾಚಿಕೆಗೇಡಿನ ಕೆಲಸವೆಂದೇನೋ ಎಲ್ಲರಿಗೂ ಗೊತ್ತಾಗಿದೆ. ಕಾರಣವೇನೆಂದರೆ ಸುಮಾರು ಮೂವತ್ತು ಮೂವತ್ತೈದು ವರ್ಷಗಳ ಹಿಂದೆ ನಾಡಿನ ಒಕ್ಕಲಿಗ ಮುಖಂಡರಲ್ಲಿ ಒಂದು ಚಳುವಳಿಯೆದ್ದಿತು. ಆ ಚಳುವಳಿಗೆ ಕ್ರೈಸ್ತ ಪಾದ್ರಿಗಳ ಉಪದೇಶವೂ, ಮೈಸೂರು ಸರಕಾರದ 'ಮಲೆನಾಡು ಅಭಿವೃದ್ಧಿ ಇಲಾಖೆ'ಯ ಬೋಧನೆಯೂ, ಬ್ರಿಟೀಷ್ ಆಳ್ವಿಕೆಯಿಂದುಂಟಾದ ನಾಗರಿಕತೆಯ ಆಗಮನವೂ, ಕಾಫಿ ವೈನು ವಿಸ್ಕಿ ಇತ್ಯಾದಿಯಾದ ವಿದೇಶೀಯ ಪಾನೀಯಗಳ ಆಮದೂ, ಸನ್ನಿವೇಶ ಪ್ರಭಾವದಿಂದ ಜನರಲ್ಲಿ ಸ್ವಾಭಾವಿಕವಾಗಿ ಉತ್ಪನ್ನವಾದ ಜಾಗ್ರತೆಯೂ ಕಾರಣಗಳಾದುವೆಂದು ಊಹಿಸಬಹುವು"[೧೫]. ಅಂತೆಯೇ ಆಸ್ಪತ್ರೆ, ಕಾಫಿ, ಕ್ರಾಪ್ಪ್, ಬೈಸಿಕಲ್ಲು, ಸ್ಕೂಲು, ತಳುಕಿನ ಚಪ್ಪಲಿ, ಶುಭ್ರ ಬಿಳಿ ಬಟ್ಟೆಗಳು..... ಮುಂತಾದ ವಸ್ತುಗಳು ನಾಗರೀಕತೆಯ ಪ್ರತಿರೂಪಗಳಾಗಿ ಕಾದಂಬರಿಯನ್ನು ಪ್ರವೇಶಿಸಿ ಆ ಮೂಲಕವೂ ಸಮಾಜದ ಸ್ಥಿತ್ಯಂತರಕ್ಕೆ ಕಾರಣವಾದಂಥ ವಸಾಹತುಶಾಹಿ ಅಂಶಗಳನ್ನು ಕಾಣಬಹುದು.

ವಿದ್ಯಾಭ್ಯಾಸವು ಬ್ರಾಹ್ಮಣರ ಸ್ವತ್ತೆಂದು ತಿಳಿದಿದ್ದ ಸಂದರ್ಭದಲ್ಲಿ ಆಧುನಿಕ ಶಿಕ್ಷಣವು ಸಮಾಜದ ಎಲ್ಲಾ ಸ್ತರಗಳಿಗೂ ತಲುಪಿದಾಗ ಅದನ್ನೂ ಗುಮಾನಿಯಿಂದ ನೋಡುವ ಮನಸ್ಥಿತಿಗಳನ್ನು "ನಾನು ಹೇಳಿದ್ದೆ ನಿನಗೆ ಮೊದಲೇ, ಈಗಿನ ವಿದ್ಯಾಭ್ಯಾಸ ಹುಡುಗರನ್ನು ಹಾಳು ಮಾಡಿಬಿಡುತ್ತದೆ ಎಂದು, ದೇವರು ದಿಂಡರು ಭಕ್ತಿ ಎಲ್ಲ

ನಿರ್ನಾಮ, ಜೊತೆಗೆ ನುರಾರು ಹವ್ಯಾಸಗಳನ್ನು ಬೇರೆ ಕಲಿತು ಬಿಡುತ್ತಾರೆ, ನಿಮ್ಮ ಮನೆ ಜಮೀನು ಉಳಿಯಬೇಕಾದರೆ ಅವರ ಓದು ನಿಲ್ಲಿಸಿ, ಮದುವೆ ಗಿದುವೆ ಮಾಡಿ ಕೆಲಸಕ್ಕೆ ಹಚ್ಚು... ಈ ಶೂದ್ರ ಮಕ್ಕಳಿಗೆಲ್ಲಾ ಉಪನಿಷತ್ತು ಭಗವದ್ಗೀತೆ ಗಂಧವಾದರು ಗೊತ್ತಾಗುತ್ತದೆಯೇ ?[೧೬]" ಈ ಸಂಭಾಷಣೆಯಿಂದ ಗ್ರಹಿಸಬಹುದಾಗಿದೆ. ಇದು ಮೇಲ್ವರ್ಗದ ಗ್ರಹಿಕೆಯಾದರೆ ಕೆಳವರ್ಗದವರು ಇಂಥ ತಿಳುವಳಿಕೆ, ಜ್ಞಾನಕ್ಕಾಗಿ ಹಂಬಲಿಸುವ, ತಮ್ಮ ಪರಿಸ್ಥಿತಿಗಳಿಗಾಗಿ ಬೇಸರಿಸುವುದನ್ನು ಚೆನ್ನಯ್ಯ, ಪುಟ್ಟಮ್ಮ ಗಂಡುಮಗುವೊಂದನ್ನು ಪಡೆದಾಗ; "ಅಗ್ರಹಾರದ ವೆಂಕಪ್ಪ ಜೋಯಿಸರು ಕೂಸಿಗೆ 'ಕರಿಯಣ್ಣ' ಎಂದು ಹುಟ್ಟು ಹೆಸರು ಇಟ್ಟುಕೊಟ್ಟಿದ್ದರಂತೆ. ಚೆನ್ನಯ, ಈ ಹಾರುವರ ದೆಸೆಯಿಂದ ನಮಗೆ ಉಳಿಗಾಲವಿಲ್ಲ ! ಹೆಸರುಗಳನ್ನಾದರೂ ಇಟ್ಟುಕೊಡಬಾರ್ದೆ ! ಅದಕ್ಕು ಹೊಟ್ಟೆ ಕಿಚ್ಚು ಅಂತಾ ಕಾಣ್ತದೆ. ಕರಿಯ, ಸಿಂಡ, ತಿಮ್ಮ, ಕಾಳ, ಜೋಳ ಇವೇ ನಮ್ಮ ಪಾಲಿಗೆ ! ಎಂದು ಹೂವಯ್ಯನಿಗೆ ಒಂದು ಒಳ್ಳೆಯ ಕರೆಯುವ ಹೆಸರು ಇಡುವಂತೆ ಹೇಳಿದನು"[೧೭]. ಇದು ಭಾರತೀಯ ಸಂದರ್ಭದಲ್ಲಿದ್ದ ಜಾತಿ ಅಸಮಾನತೆಯ ಕ್ರೌರ್ಯಗಳನ್ನು ನವೋದಯ ಸಾಹಿತ್ಯ ವಿಡಂಭಿಸುವುದರ ಮೂಲಕ ತನ್ನದೇ ಪರಂಪರೆಯೊಳಗಿದ್ದ ಧಮನಕಾರಿ ವ್ಯವಸ್ಥೆಯ ವಿರುದ್ಧ ಪ್ರತಿರೋಧವನ್ನು ಒಡ್ಡುತ್ತದೆ.

ಭಾರತದ ಒಂದಿಡೀ ಗ್ರಾಮಕೇಂದ್ರಿತ ಪರಿಸರದಲ್ಲಿ ವಸಾಹತುಶಾಹಿಯ ಯಂತ್ರನಾಗರೀಕತೆಯ ಪ್ರವೇಶ ಹಂತ ಹಂತವಾಗಿ ಪ್ರವೇಶಿಸುವುದನ್ನು ಆಕ್ರಮಣಕಾರಿ, ವಿನಾಶಕಾರಿ ಎಂದೇ ಕುವೆಂಪು ಪರಿಭಾವಿಸಿದ್ದರು. "ಪಟ್ಟಣದ ಸಂದಣಿಯಲ್ಲಿ ಗಮನಕ್ಕೂ ಬಾರದ ಬೈಸಿಕಲ್ಲು ಕಾಡುಬೀಡಿನಲ್ಲಿ ವಿಶೇಷಾತಿಥಿಯಾಗಿ ತೋರಿತು. ಎಷ್ಟಾದರು ಆಕ್ರಮಣಶೀಲವಾದ ಆ ಚಂಚಲಮನ ನಾಗರಿಕ ಲೋಕವು ಮಲೆನಾಡಿಗೆ ದಾಳಿಯಿಡುವ ಮೊದಲು ಮುನ್ನಟ್ಟಿದ ರಣಚಾರನಲ್ಲವೆ ಆ ಬೈಸಿಕಲ್ ಸವಾರ !"[೧೮] ಆಧುನಿಕ ಪಾಶ್ಚಾತ್ಯ ನಾಗರೀಕತೆಯ ಸಂಪರ್ಕದಿಂದ ಪಲ್ಲಟಗೊಂಡ ಪ್ರಕ್ರಿಯೆಯಾಗಿ ಹಳ್ಳಿಗಳನ್ನು ನೋಡುವ ಕ್ರಮ ಇದಾಗಿದೆ. ಬೈಸಿಕಲ್ ಪ್ರಸಂಗದ ನಂತರದ ಹತ್ತು ವರ್ಷಗಳ ತರುವಾಯ ಮಲೆನಾಡಿಗೆ ನವಜೀವನ ಕಾಲಿಟ್ಟಿತು ಎನ್ನುತ್ತಾ ಅಲ್ಲಿನ ಬದಲಾವಣೆಗಳನ್ನು ಆಸ್ಪತ್ರೆ, ಸ್ಕೂಲು, ಪೋಸ್ಟಾಪೀಸು, ಅಂಗಡಿಗಳು, ಹಿಂದೆ ಬೈಸಿಕಲ್ಲೇ ಪರಿಚಯವಿರದಿದ್ದ ರಸ್ತೆಗಳು ಇಂದು ಕಾರು, ಬಸ್ಸುಗಳ ಕೋಟಲೆಗಳಿಂದ ಕೂಡಿತ್ತು ಎನ್ನುತ್ತಾ, ಗಾಂಧಿ ಟೋಪಿ, ಪತ್ರಿಕೆ, ಇಂಥ ವಿವರಗಳನ್ನು ಕೊಡುತ್ತಾರೆ. ಇಲ್ಲಿ

ಸುಧಾರಣಾ ಮನೋಭಾವನೆಯನ್ನು, ಹೂವಯ್ಯನ ಮೂಲಕ ರಾಷ್ಟ್ರೀಯತೆಯನ್ನು ಕಾದಂಬರಿ ಪ್ರತಿಪಾದಿಸುತ್ತಿದೆ.

ಕುವೆಂಪು ಮತ್ತಿತರ ನವೋದಯ ಲೇಖಕರು ವಸಾಹತುಶಾಹಿಯ ಆಧುನಿಕತೆಯಿಂದ ಬಂದಂತಹ ವೈಚಾರಿಕತೆ, ಆಧುನಿಕೆ, ವೈಜ್ಞಾನಿಕತೆ ಇವುಗಳಂತಹ ಸುಧಾರಣಾವಾದಿ ಅಂಶಗಳನ್ನು ಸ್ವೀಕರಿಸುತ್ತಾರೆ, ಹಾಗೆಯೇ ವಸಾಹತುಶಾಹಿಯ ಆಕ್ರಮಣಕಾರಿ ವ್ಯವಸ್ಥೆಯ ವಿರುದ್ಧ ಪ್ರತಿರೋಧವನ್ನು ಒಡ್ಡುತ್ತಾರೆ. ಆಧುನಿಕತೆಯಿಂದ ಬಂದ ವೈಜ್ಞಾನಿಕ, ವೈಚಾರಿಕ ಮನೋಭಾವಗಳನ್ನು ರೂಪಿಸಿಕೊಂಡ ಈ ಲೇಖಕರು ಇಲ್ಲಿನ ಪರಂಪರೆಯೊಳಗಿದ್ದ ಊಳಿಗಮಾನ್ಯ ವ್ಯವಸ್ಥೆಯ ವಿರುದ್ಧ ಪ್ರತಿರೋಧವನ್ನು ಒಡುತ್ತಾರೆ. ಇದರ ಮೂಲಕ ಬಂದು ಸಮಾಜವಾದಿ ರಾಷ್ಟ್ರದ ಕಲ್ಪನೆಯನ್ನು ಸೃಷ್ಟಿಸುವ ಕೆಲಸ ನವೋದಯ ಸಾಹಿತ್ಯದಲ್ಲಿ ನಡೆದಿದೆ.

## ಟಿಪ್ಪಣಿಗಳು

೧. ಕನ್ನಡ ಕಥನ ಸಾಹಿತ್ಯ : ಕಾದಂಬರಿ- ಡಾ॥ ಜಿ.ಎಸ್.ಅಮೂರ, ಪುಟ ೨೧. (ಮಾಸ್ತಿಯವರ ಸಾಹಿತ್ಯ ಪ್ರೇರಣೆ, ಬಾಪ್ಕೊ ಕೃತಿಯಿಂದ)

೨. ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳು, ಡಾ॥ ಡಿ.ಆರ್.ನಾಗರಾಜ್ ಪುಟ ೧೪೨.

೩. ಮಲೆಗಳಲ್ಲಿ ಮದುಮಗಳು : ಕುವೆಂಪು, ಪುಟ ೧೧೦

೪. ಅದೇ. ಪುಟ ೧೧೦

೫. ಅದೇ. ಪುಟ ೧೫೩

೬. ಅದೇ. ಪುಟ ೮೬

೭. ಅದೇ. ಪುಟ ೧೫೬

೮. ಅದೇ. ಪುಟ ೨೦೮

೯. ಅದೇ. ಪುಟ ೨೭೯

೧೦. ಮೈಮನಗಳ ಸುಳಿಯಲ್ಲಿ : ಶಿವರಾಮ ಕಾರಂತ, ಪುಟ ೧೨, ೧೩

೧೧. ಚೋಮನದುಡಿ : ಶಿವರಾಮ ಕಾರಂತ, ಪುಟ ೧೨

೧೨. ಚೋಮನ ದುಡಿ : ಶಿವರಾಮ ಕಾರಂತ, ಪುಟ ೧೦೬

೧೩. ಮರಳಿ ಮಣ್ಣಿಗೆ : ಶಿವರಾಮ ಕಾರಂತ, ಪುಟ ೧೦೨, ೧೦೩

೧೪. ಅದೇ. ಪುಟ ೧೩೮

೧೫. ಕಾನೂರು ಹೆಗ್ಗಡಿತಿ : ಕುವೆಂಪು, ಪುಟ ೨೧೦

೧೬. ಕಾನೂರು ಹೆಗ್ಗಡಿತಿ, ಪುಟ ೭೪

೧೭. ಅದೇ. ಪುಟ ೬೨೦

೧೮. ಅದೇ. ಪುಟ ೩೦೮

# ಅಧ್ಯಾಯ-೪

## ನವೋದಯ ಕಾದಂಬರಿಗಳಲ್ಲಿ ಮತಾಂತರ : ವಿಭಿನ್ನ ನೆಲೆಗಳ ಅಧ್ಯಯನ

ನವೋದಯ ಕಾದಂಬರಿಗಳಲ್ಲಿ ಮತಾಂತರದ ನೆಲೆಗಳನ್ನು ಹುಡುಕುವಾಗ ಆ ಕಾಲದ ಚಾರಿತ್ರಿಕ ಒತ್ತಡಗಳು ಹಾಗೂ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಶೋಧಿಸಬೇಕಾಗುತ್ತದೆ. ನವೋದಯ ಸಾಹಿತ್ಯವು ರೂಪುಗೊಳ್ಳುವಾಗ ಭಾರತೀಯ ಸಂಸ್ಕೃತಿ ಮುಖ್ಯವಾದ ಬಿಕ್ಕಟ್ಟುಗಳನ್ನು ಎದುರಿಸುತ್ತಿದ್ದ ಸಂಧರ್ಭ. ವಸಾಹತುಶಾಹಿಯು ಸಮಾಜದ ಆರ್ಥಿಕ-ರಾಜಕೀಯ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ತನ್ನ ಹಿಡಿತವನ್ನು ಸಾಧಿಸಿದ್ದ ಸಂದರ್ಭ. ವಸಾಹತುಶಾಹಿಯ ಹಿಡಿತಗಳಿಂದ ಪಾರಾಗಲು ದೇಶವ್ಯಾಪಿ ಸ್ವಾತಂತ್ರ್ಯ ಚಳುವಳಿ ರೂಪುಗೊಳ್ಳುತ್ತಿದ್ದ ಸಂದರ್ಭ. ಈ ಬಿಕ್ಕಟ್ಟುಗಳ ನಡುವೆ ನವೋದಯ ಕಾಲಘಟ್ಟದ ಸಾಹಿತ್ಯವು ರೂಪುಗೊಂಡಿದೆ ಎಂದು ಗಮನಿಸಿದರೆ ಅದು ತನ್ನ ಕಾಲದ ಬಿಕ್ಕಟ್ಟುಗಳನ್ನು ಹೇಗೆ ಒಳಗೊಳ್ಳುತ್ತದೆ ಎಂಬುದನ್ನು ಚರ್ಚಿಸಬಹುದು. ವಸಾಹತುಶಾಹಿಯಿಂದ ಬಂದ ಆಧುನಿಕತೆ ಭಾರತೀಯ ಸಂಸ್ಕೃತಿಯ ಮೇಲೆ ಹಲವು ಪ್ರಭಾವಗಳನ್ನು, ಪರಿಣಾಮಗಳನ್ನು ಉಂಟು ಮಾಡಿತು. ಈ ಆಧುನಿಕತೆಯ ಜೊತೆಗೆ ಭಾರತೀಯ ಸಂಸ್ಕೃತಿಯು ಅನುಸಂಧಾನ ನಡೆಸುವ ಮೂಲಕ ಆಧುನಿಕತೆಯ ಪ್ರಭಾವ ಮತ್ತು ಪರಿಣಾಮಗಳನ್ನು ಜೀರ್ಣಿಸಿಕೊಂಡಿತು. ಭಾರತೀಯ ಸಂಸ್ಕೃತಿಯು ಚರಿತ್ರೆಯುದ್ದಕ್ಕೂ ಎಲ್ಲ ಕಾಲಗಳಲ್ಲಿಯೂ ಹಲವಾರು ವಿಭಿನ್ನ ಸಂಸ್ಕೃತಿಗಳ ಸಂಪರ್ಕ, ಸಂಘರ್ಷಗಳಿಗೆ ಒಳಗಾಗುತ್ತಾ ಬಂದಿದೆ. ಅಂತಹ ಸಂಸ್ಕೃತಿಗಳ ಸಂಪರ್ಕಗಳಿಗೆ ಒಳಗಾಗುತ್ತಲೇ ತನ್ನ ಚಲನಶೀಲತೆಯನ್ನು ಉಳಿಸಿಕೊಂಡು ಮುಂದುವರಿಯುತ್ತಿರುವುದು ಅದರ ವಿಶಿಷ್ಟತೆಯಾಗಿದೆ. ಅಂದರೆ ಭಾರತೀಯ ಸಂಸ್ಕೃತಿ ಆಯಾಕಾಲದ ಪರಕೀಯ ಸಂಸ್ಕೃತಿಗಳ ಆಕರ್ಷಣೆ-ವಿಕರ್ಷಣೆಗಳಿಗೆ ಒಳಗಾಗುತ್ತಾ ಆ ಸಂಸ್ಕೃತಿಯ ಉತ್ತಮ ಅಂಶಗಳನ್ನು ಸ್ವೀಕರಿಸುತ್ತಾ, ತನ್ನ ಅಸ್ತಿತ್ವಕ್ಕೆ ಧಕ್ಕೆ ಬರುವ ಪ್ರತಿಗಾಮಿ ನೆಲೆಗಳಿಗೆ ಪ್ರತಿರೋಧವನ್ನು ಒಡ್ಡುತ್ತಾ ಬಂದಿರುವುದನ್ನು ಕಾಣಬಹುದು.

ಒಂದು ಕಾಲಘಟ್ಟದಲ್ಲಿ ಸಂಸ್ಕೃತಿಯೊಂದು ಎದುರಿಸುವ ಬಿಕ್ಕಟ್ಟುಗಳನ್ನು ಇತರ ಜ್ಞಾನ ಶಾಖೆಗಳಿಗಿಂತಲೂ ಸೂಕ್ಷ್ಮವಾಗಿ, ಸಮರ್ಥವಾಗಿ ಎದುರಿಸುವ ಛಲಗಾರಿಕೆಯನ್ನು ಸಾಹಿತ್ಯ ತೋರುತ್ತದೆ. ಅಂತೆಯೇ ವಸಾಹತುಶಾಹಿ ತಂದ ಬಿಕ್ಕಟ್ಟುಗಳನ್ನು ನವೋದಯ ಸಾಹಿತ್ಯವು ಎದುರಿಸಿರುವ ಬಗೆ ವಿಶಿಷ್ಟವಾದುದು. ಇದು

ವಸಾಹತುಶಾಹಿ ತಂದ ಶಿಕ್ಷಣ, ವೈಚಾರಿಕತೆ, ವೈಜ್ಞಾನಿಕತೆ ಹಾಗೂ ರಾಷ್ಟ್ರೀಯತೆಯ ಪರಿಕಲ್ಪನೆಗಳೊಂದಿಗೆ ಅನುಸಂಧಾನ ನಡೆಸಿ ಈ ಪರಿಕಲ್ಪನೆಗಳನ್ನು ತನ್ನ ಸಂಸ್ಕೃತಿಗೆ ಒಗ್ಗಿಸಿಕೊಂಡ ರೀತಿ ಅನನ್ಯವಾದುದು. ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಕಾಣಬಹುದಾದ ವಿಶಿಷ್ಟ ಗುಣವೇ ಅನುಸಂಧಾನಕ್ಕೆ ಸಂಬಂಧಿಸಿದ್ದಾಗಿದೆ. ಪಂಪ, ಕುಮಾರವ್ಯಾಸರು ವ್ಯಾಸನನ್ನು ಅನುಸರಿಸಿದರೆ ಅವನ ಜೊತೆಗೆ ಒಂದು ಅಂತರವನ್ನು ಸಾಧಿಸುತ್ತಾರೆ. ವ್ಯಾಸನ ಕಥೆಯನ್ನು ವಸ್ತುವಾಗಿ ಆರಿಸಿಕೊಂಡು ಅದನ್ನು ಅನುಸಂಧಾನ ಮಾಡುವ ಮೂಲಕ ವಿಶಿಷ್ಟವಾಗಿಸುತ್ತಾರೆ. ಅಂತೆಯೇ ನವೋದಯ ಲೇಖಕರೂ ಈ ಕ್ರಮವನ್ನು ಸ್ವೀಕರಿಸಿದ್ದಾರೆ. ಇವರು ಭಾರತೀಯ ಸಮಾಜದೊಳಗಿನ ಊಳಿಗಮಾನ್ಯ ಹಾಗೂ ಪುರೋಹಿತಶಾಹಿ ವ್ಯವಸ್ಥೆಗಳ ವಿಮರ್ಶೆ ಹಾಗೂ ವಿರೋಧಕ್ಕೆ ಆಧುನಿಕತೆಯಿಂದ ಬಂದ ಪರಿಕಲ್ಪನೆಗಳನ್ನು ಬಳಸುತ್ತಾರೆ. ಆ ಮೂಲಕ ಭಾರತೀಯ ಸಾಂಸ್ಕೃತಿಕ ಪರಂಪರೆಗೆ ಹೊಸ ವಿನ್ಯಾಸವೊಂದನ್ನು ರೂಪಿಸುತ್ತಾರೆ. ಈ ಹೊಸ ವಿನ್ಯಾಸದ ಮೂಲಕ ವಸಾಹತುಶಾಹಿಗೆ ಪ್ರತಿರೋಧವನ್ನು ಕೋರುತ್ತಾರೆ.

ಪ್ರತಿಕಾಲಘಟ್ಟದ ಸಾಹಿತ್ಯವು ತನ್ನ ಕಾಲದ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಎದುರಿಸಲು ಹೊಸ ಪ್ರಕಾರಗಳನ್ನು ಸೃಷ್ಟಿಸಿಕೊಳ್ಳುತ್ತದೆ. ಕನ್ನಡದಲ್ಲಿ ಚಂಪೂ, ವಚನ, ರಗಳೆ, ಷಟ್ಪದಿ, ಕೀರ್ತನಾ ಸಾಹಿತ್ಯ ಪ್ರಕಾರಗಳೆಲ್ಲವೂ ಈ ಬಗೆಯವೇ ಆಗಿವೆ. ಪಂಪ ಸಂಸ್ಕೃತ ಪರಂಪರೆಯ ಜೊತೆಗೆ ಅನುಸಂಧಾನ ನಡೆಸಲು ಚಂಪೂ ಪ್ರಕಾರವನ್ನು ಸೃಷ್ಟಿಸಿಕೊಂಡಿದ್ದಾನೆ. ಹರಿಹರ ಶಿವಭಕ್ತರ ಕಥನಗಳನ್ನು ಹೇಳಲು ರಗಳೆಯ ಪ್ರಕಾರವನ್ನು ಸೃಷ್ಟಿಸಿಕೊಳ್ಳುತ್ತಾನೆ. ಅದೇ ರೀತಿ ಆಧುನಿಕ ಕನ್ನಡ ಸಾಹಿತ್ಯವು ತನ್ನ ಕಾಲದ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಎದುರಿಸಲು ಕಾದಂಬರಿ ಪ್ರಕಾರವನ್ನು ಆವಾಹಿಸಿಕೊಳ್ಳುತ್ತದೆ. ಕಾದಂಬರಿ ಪ್ರಕಾರವು ಯೂರೋಪಿನದ್ದೇ ಆದರೂ ಅಲ್ಲಿ ಅದು ಔದ್ಯೋಗಿಕ ಕ್ರಾಂತಿ ಹಾಗೂ ಬಂಡವಾಳಶಾಹಿ ಶಕ್ತಿಗಳಿಂದ ಉಂಟಾದ ಮಧ್ಯಮ ವರ್ಗದ ಆಸೆಗಳನ್ನು ತಣಿಸಲು ಸೃಷ್ಟಿಯಾಗುತ್ತದೆ. ಆದರೆ ಭಾರತದಲ್ಲಿ ಅದು ವಸಾಹತುಶಾಹಿ ಹಾಗೂ ಊಳಿಗಮಾನ್ಯ ವ್ಯವಸ್ಥೆಗಳ ವಿಶ್ಲೇಷಣೆಯಾಗಿ ರೂಪುಗೊಂಡಿತು. ಇದು ವಸಾಹತುಶಾಹಿ ತಂದ ಆಧುನಿಕತೆ ಹಾಗೂ ಸಾಮ್ರಾಜ್ಯ ಶಾಹಿ ಧೋರಣೆಗಳು, ಭಾರತೀಯ ಪರಂಪರೆಯಲ್ಲಿದ್ದ ಪುರೋಹಿತಶಾಹಿ ಹಾಗೂ ಊಳಿಗಮಾನ್ಯ ವ್ಯವಸ್ಥೆಗಳಿಗೆ ಪ್ರತಿರೋಧಗಳನ್ನು ರೂಪಿಸುವಲ್ಲಿ ಯಶಸ್ವಿಯಾದ ಸಾಹಿತ್ಯ ಪ್ರಕಾರ. ಹಾಗೆಯೇ ಪರಂಪರೆಯನ್ನು ಮುರಿದು ಕಟ್ಟುವಲ್ಲಿಯೂ ಇದು

ಸಹಕಾರಿಯಾಗಿದೆ. ಇದು ವಸಾಹತುಶಾಹಿಯು ತಂದ ಮತ ಪ್ರಚಾರ ಹಾಗೂ ಮತಾಂತರ ಪ್ರಕ್ರಿಯೆಗಳನ್ನು ವಿಶ್ಲೇಷಣಾತ್ಮಕವಾಗಿ ನೋಡಲು ಪೂರಕವಾಗಿರುವುದನ್ನು ನವೋದಯ ಕಾದಂಬರಿಗಳಲ್ಲಿನ ಮತಾಂತರ ಚರ್ಚೆಯ ಮೂಲಕ ಈ ಅಧ್ಯಾಯದಲ್ಲಿ ಚರ್ಚಿಸಲಾಗುತ್ತದೆ.

ವಸಾಹತುಶಾಹಿ ಕಾಲಘಟ್ಟದಲ್ಲಿ ಎರಡು ಯಜಮಾನ್ಯಗಳು ಒಟ್ಟಿಗೆ ಕೆಲಸ ಮಾಡುತ್ತಿದ್ದವು. ಒಂದು, ಬ್ರಿಟೀಷರ ವಿದೇಶಿ ಯಜಮಾನ್ಯ ಶಕ್ತಿ. ಎರಡು, ಭಾರತೀಯ ಸಾಮಾಜಿಕ ವ್ಯವಸ್ಥೆಯ ದೇಸೀ ಯಜಮಾನ್ಯ. ವಿದೇಶಿ ಯಜಮಾನ್ಯದ ಇತಿಹಾಸ ಸೀಮಿತ ಕಾಲಘಟ್ಟಕ್ಕೆ ಸೇರಿದ್ದಾದರೆ, ಶ್ರೇಣೀಕೃತ ವರ್ಣಾಶ್ರಮ ಅಥವಾ ಜಾತಿ ವ್ಯವಸ್ಥೆಯನ್ನಾಧರಿಸಿದ ದೇಶಿ ಯಜಮಾನ್ಯಕ್ಕೆ ಎರಡು ಸಾವಿರ ವರ್ಷಗಳ ಇತಿಹಾಸವಿತ್ತು. ಈ ಎರಡೂ ಯಜಮಾನ್ಯಗಳನ್ನು ಭಾರತೀಯ ಚಿಂತಕರು ಒಟ್ಟಿಗೆ ಎದುರಿಸಬೇಕಾದ ಸಂದರ್ಭ ಹತ್ತೊಂಭತ್ತು ಇಪ್ಪತ್ತನೇ ಶತಮಾನಗಳಲ್ಲಿ ಏರ್ಪಟ್ಟಿತು. ಈ ಸಂದರ್ಭದಲ್ಲಿ ರೂಪುಗೊಂಡ ನವೋದಯ ಸಾಹಿತ್ಯವು ಈ ಎರಡೂ ಯಜಮಾನ್ಯ ಶಕ್ತಿಗಳಿಗೆ ಪ್ರತಿಕ್ರಿಯಿಸಿ ನವ ಸಮಾಜವಾದಿ ನಿಲುವುಗಳನ್ನು ಪ್ರಕಟಿಸುವ ಒತ್ತಡದಲ್ಲಿತ್ತು. ಹಾಗಾಗಿ ಅದು ಪುರೋಹಿತ ಶಾಹಿಯ ಸಾಂಪ್ರದಾಯಿಕ ಅಸಮಾನತೆಗಳನ್ನು ಪ್ರತಿರೋಧಿಸಿ ಪರಂಪರೆಯನ್ನು ಮುರಿದು ಕಟ್ಟುವುದರ ಜೊತೆಗೆ ವಸಾಹತುಶಾಹಿಯ ಸಮಜೋ-ರಾಜಕೀಯ ಉದ್ದೇಶಗಳಿಗಾಗಿ ರೂಪುಗೊಂಡ ಮತಾಂತರದಂತಹ ಪ್ರತಿಕ್ರಿಯೆಗಳನ್ನು ಪ್ರತಿರೋಧಿಸುವ ಕೆಲಸ ಮಾಡಿತು. ನವೋದಯ ಸಾಹಿತ್ಯವು ಒಟ್ಟಿಗೆ ಎರಡು ಯಜಮಾನ್ಯ ಶಕ್ತಿಗಳಿಂದ ಭಾರತೀಯ ಪರಂಪರೆಯನ್ನು ರಕ್ಷಿಸುವ ಕೆಲಸವನ್ನು ಮಾಡಿತು. ಈ ಹಿನ್ನೆಲೆಯಲ್ಲಿ ನವೋದಯವು ಮತಾಂತರಕ್ಕೆ ತೋರಿದ ಭಿನ್ನ ಪ್ರತಿಕ್ರಿಯಾ ಮಾದರಿಗಳನ್ನು ಚರ್ಚಿಸಬಹುದಾಗಿದೆ.



**ಮತಾಂತರ ಪ್ರಕ್ರಿಯೆಗಳ ಸ್ವರೂಪ :**

ಮತಾಂತರ ಪ್ರಕ್ರಿಯೆ ಅತ್ಯಂತ ಪ್ರಾಚೀನ ಕಾಲದಿಂದಲೂ ಭಾರತದ ಸಾಂಸ್ಕೃತಿಕ ಚರಿತ್ರೆಯಲ್ಲಿ ಬೆಳೆದು ಬಂದಿದೆ. ಈ ಮತಾಂತರ ಪ್ರಕ್ರಿಯೆಯ ಚರಿತ್ರೆಯು ವಸಾಹತು ಪೂರ್ವಕಾಲದಲ್ಲಿ ವೈದಿಕಶಾಹಿ ವಿರೋಧ ಹಾಗೂ ಮುಸ್ಲಿಮರ ಮತಾಂಧತೆಯ ಸ್ವರೂಪದಲ್ಲಿದೆ. ಆದರೆ ಈ ಪ್ರಕ್ರಿಯೆ ವಸಾಹತುಶಾಹಿ ಸಂದರ್ಭದಲ್ಲಿ ಪಡೆದುಕೊಂಡ ಸ್ವರೂಪ ಬೇರೆಯದೇ ಆಗಿದೆ. ವಸಾಹತು ಶಾಹಿಯು ತನ್ನ

ಸಾಂಸ್ಕೃತಿಕ ಹೇರಿಕೆಯ ಪ್ರಮುಖ ಅಸ್ತ್ರವನ್ನಾಗಿ ಮತಾಂತರವನ್ನು ಬಳಸಿತು. ಅದು ತಂದ ಆಧುನಿಕ ಉತ್ಪನ್ನಗಳು ಮತ್ತು ಶಿಕ್ಷಣದ ಮೂಲಕ ಕ್ರೈಸ್ತಧರ್ಮ ಪ್ರಚಾರ ಹಾಗೂ ಮತಾಂತರಗಳನ್ನು ನಯಗಾರಿಕೆಯಿಂದ ಹರಡಲು ಪ್ರಯತ್ನಿಸಿತು. ಅದು ತಂದ ಯಂತ್ರಗಳ ಮೂಲಕ ಇಲ್ಲಿ ಆಮಿಷಗಳನ್ನು ಪರೋಕ್ಷವಾಗಿ ಒಡ್ಡುತ್ತಿದ್ದುದಕ್ಕೆ ಕುವೆಂಪುರವರ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಬರುವ ಬೀಸೆಕಲು ಪ್ರಸಂಗವನ್ನು ಉದಾಹರಣೆಯಾಗಿ ನೋಡಬಹುದಾಗಿದೆ. ಹಾಗೆಯೇ ವಸಾಹತುಶಾಹಿ ತಂದ ಆಧುನಿಕ ಶಿಕ್ಷಣ ಪದ್ಧತಿಯ ಮೂಲಕ ಕ್ರೈಸ್ತ ಮಿಶನರಿಗಳು ಮತಪ್ರಚಾರ ಕಾರ್ಯವನ್ನು ಕೈಗೊಂಡರು. ಇದನ್ನೂ ಕುವೆಂಪುರವರು ತಮ್ಮ ನೆನಪಿನ ದೋಣಿಯಲಿ, "ಆಗತಾನೇ ಸಮಗ್ರ ಭರತಖಂಡದಲ್ಲಿ ಸುಸ್ಥಾಪಿತವಾದ ಬ್ರಿಟಿಷ್ ಸಾಮ್ರಾಜ್ಯ ಚೆನ್ನಾಗಿ ಬೇರುಬಿಡಲು ತೊಡಗಿದ್ದ ಕಾಲ. ಆಡಳಿತ ವ್ಯವಸ್ಥೆಯನ್ನು ಕ್ರಮಗೊಳಿಸಿದ ಆಳರಸರು ಅದನ್ನು ಸುಗಮವಾಗಿ ತಮ್ಮ ಇಚ್ಛೆಯಂತೆ ನಡೆಸಿಕೊಂಡು ಹೋಗಲು ನಮ್ಮವರನ್ನೇ ದುಡಿವಾಳುಗಳನ್ನಾಗಿ ಮಾಡಲು ನಿರ್ಧರಿಸಿ, ಅದಕ್ಕೆ ಅನುಕೂಲವೂ ಅನುರೂಪವೂ ಆದ ವಿದ್ಯಾಭ್ಯಾಸ ಪದ್ಧತಿಯನ್ನು ಜಾರಿಗೆ ತಂದರು. ಅದರಲ್ಲಿ ಅತ್ಯಂತ ಮುಖ್ಯವಾದದ್ದು ಮತ್ತು ಬಹುಕಾಲ ಪರಿಣಾಮಕಾರಿಯಾದದ್ದು – ಇಂಗ್ಲೀಷ್ ಭಾಷೆಯ ಕಲಿಕೆ ಮತ್ತು ಇಂಗ್ಲೀಷ್ ಭಾಷೆಯನ್ನೇ ಶಿಕ್ಷಣ ಮಾಧ್ಯಮವನ್ನಾಗಿ ಅಂಗೀಕರಿಸಿದ್ದು....... ಆದರೆ ಮತಪ್ರಚಾರ ಮತ್ತು ಮತಾಂತರ ಉದ್ದೇಶವೆ ಪ್ರಧಾನವಾಗಿದ್ದ ಕ್ರೈಸ್ತ ಮಿಷನರಿಗಳು ಬ್ರಿಟಿಷ್ ಸಾಮ್ರಾಜ್ಯದ ಮತ್ತು ಕ್ರೈಸ್ತ ಧರ್ಮದ ಮುಂಚೂಣಿಯ ದಳಗಳಾಗಿ ಸಹ್ಯಾದ್ರಿಯ ಕಾಡುಹಳ್ಳಿಗಳಿಗೂ ಕಾಲಿಟ್ಟರು. ಸ್ಕೂಲು, ಆಸ್ಪತ್ರೆಗಳನ್ನು ತೆರೆದರು; ಸಾಧ್ಯವಾದಷ್ಟು ಜನರನ್ನು ತಮ್ಮ ಮತಕ್ಕೆ ಸೇರಿಸಿಕೊಂಡರು, ಕನ್ನಡ ಭಾಷೆಗೆ ಪರಿವರ್ತಿತವಾದ ಬೈಬಲ್ಲನ್ನು 'ಮ್ಯಾಥ್ಯೂ ಮಾರ್ಕ್‌ಲ್ಯಾಕ್ ಬೀನ್ ಮೊದಲಾದ ಕ್ರಿಸ್ತಶಿಷ್ಯ ಸಂತರ ಸುವಾರ್ತೆಗಳನ್ನು ಓದಲು ಹಂಚಿದರು'. ಹಿಂದೂಗಳಾಗಿ ಇದ್ದು ಬ್ರಾಹ್ಮಣರಿಂದ ಶೂದ್ರರೆಂದು ತಿರಸ್ಕೃತನಾಗಿ ಮೌಢ್ಯ ಅಜ್ಞಾನಗಳ ಅಂಧಕಾರದಲ್ಲಿದ್ದವರಿಗೆ ಬೆಳಕು ತೋರಿಸುತ್ತೇವೆ'. 'ನಿಮ್ಮನ್ನು ಬ್ರಾಹ್ಮಣರ ದಾಸ್ಯದಿಂದ ಪಾರು ಮಾಡುತ್ತೇವೆ' ಎಂದು ಮನದಟ್ಟುವಂತೆ ಬೋಧಿಸಿದರು. ಶೂದ್ರರ ಮಕ್ಕಳಿಗೆ ನವೀನ ವಿದ್ಯಾಭ್ಯಾಸ ಮಾಡಿಸಲು ಅವರನ್ನು ಮೈಸೂರು ಬೆಂಗಳೂರುಗಳ ಕ್ರೈಸ್ತ ವಿದ್ಯಾಸಂಸ್ಥೆಗಳಿಗೆ ಕರೆದೊಯ್ದು, ಊಟ ಬಟ್ಟೆ ವಸತಿಗಳನ್ನು ಪುಕ್ಕಟೆಯಾಗಿಯೇ ನೀಡಿ ಅವರ ತಂದೆತಾಯಿ ಬಂಧುಗಳ ಗೌರವ ಕೃತಜ್ಞತೆಗಳನ್ನು ಸೂರೆಹೊಯ್ದರು"[೧]

ಹೀಗೆ ಬ್ರಿಟೀಷರು ಕ್ರೈಸ್ತ ಮತಪ್ರಚಾರಕ್ಕೆ ಶಿಕ್ಷಣ ಪದ್ಧತಿಯನ್ನು ದುಡಿಸಿಕೊಂಡ ಸ್ವರೂಪವನ್ನು ದಾಖಲಿಸುತ್ತಾರೆ.

ವಸಾಹತುಶಾಹಿಯ ಸಂದರ್ಭದಲ್ಲಿನ ಮತಾಂತರ ಪ್ರಕ್ರಿಯೆಗಳಿಗೆ ನವೋದಯ ಕಥನ ಸಾಹಿತ್ಯ ತೋರಿದ ಭಿನ್ನ ಪ್ರತಿಕ್ರಿಯೆಯ ನೆಲೆಗಳನ್ನು ದಾಖಲಿಸಬಹುದಾಗಿದೆ.

**೧. ರಾಷ್ಟ್ರೀಯತೆ ಮತ್ತು ಮತಾಂತರ**

ರಾಷ್ಟ್ರೀಯತೆಯ ವಸಾಹತುಶಾಹಿಯಿಂದಲೇ ರೂಪುಗೊಂಡ ಆಧುನಿಕ ಪರಿಕಲ್ಪನೆ, ಇದು ಸಾಂಪ್ರದಾಯಿಕ ರಾಜಪ್ರಭುತ್ವ ಹಾಗೂ ಪುರೋಹಿತಶಾಹಿ ವ್ಯವಸ್ಥೆಯ ವಿರುದ್ಧ ರೂಪುಗೊಳ್ಳುವ ರಾಷ್ಟ್ರಪ್ರಭುತ್ವ ಅಥವಾ ಪ್ರಜಾಪ್ರಭುತ್ವದ ಕಲ್ಪನೆಗೆ ಸಂಬಂಧಿಸಿದ್ದು, ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಬ್ರಿಟೀಷರ ವಿರುದ್ಧ ಇಡೀ ದೇಶದ ಜನಸಮುದಾಯಗಳನ್ನು ಭಾವನಾತ್ಮಕವಾಗಿ ಒಂದುಗೂಡಿಸಲು ಈ ರಾಷ್ಟ್ರೀಯತೆಯ ಪ್ರಜ್ಞೆ ಸಹಾಯಕವಾಗಿದೆ. ಹಾಗಾಗಿ ಇದಕ್ಕೆ ಹೇಗೆ ಪ್ರತಿಕ್ರಿಯಿಸಿದೆ ಎಂದು ನೋಡಬಹುದು.

ಮತಾಂತರ ಹೊರಗಿನವರ ಹುನ್ನಾರ ಎಂಬ ಭಾವನೆಯೇ ರಾಷ್ಟ್ರೀಯತೆಯಾಗಿ ನವೋದಯ ಕಾದಂಬರಿಗಳಲ್ಲಿ ಪ್ರಕಟಗೊಳ್ಳುತ್ತದೆ. ಅದಕ್ಕಾಗಿ ಅದು ತನ್ನ ಪರಂಪರೆಯೊಳಗಿನ ಮೌಢ್ಯಗಳನ್ನು ವಿಡಂಬಿಸಿ ಪರಂಪರೆಯನ್ನು ಮರು ರೂಪಿಸುವ ಕೆಲಸ ಮಾಡುತ್ತದೆ. ಪರಂಪರೆಯನ್ನು ಮುರಿದು ಕಟ್ಟುವ ಪ್ರಕ್ರಿಯೆಯೇ ರಾಷ್ಟ್ರೀಯತೆಯಾಗಿ ಪ್ರಕಟಗೊಳ್ಳುತ್ತದೆ. ಕುವೆಂಪುರವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯು ಈ ದೃಷ್ಟಿಯಿಂದ ಚಾರಿತ್ರಿಕವಾಗಿಯೂ, ಸಾಂಸ್ಕೃತಿಕವಾಗಿಯೂ ಅತ್ಯಂತ ಮುಖ್ಯವಾಗಿ ಕಾಣುತ್ತದೆ. ಕಾದಂಬರಿಯ ಒಟು ಆಶಯ ಧೋರಣೆಗಳಲ್ಲಿ ಮತಾಂತರವನ್ನು ಕುರಿತ ತನ್ನ ಖಚಿತ ಧೋರಣೆ ಯಾವುದೆಂಬುದನ್ನು ನಿರೂಪಕನಿಗೆ ಇಲ್ಲಿ ಸ್ಪಷ್ಟವಿದೆ. ಭಾರತೀಯ ಹಾಗೂ ಪಾಶ್ಚಾತ್ಯ ಪುರೋಹಿತಶಾಹಿಯ ಎರಡು ಧೋರಣೆಗಳ ಬಗೆಗೂ ಕಟಕಿ ವ್ಯಂಗ್ಯಗಳು ಕಾಣಿಸುತ್ತವೆ. ಈ ಮೂಲಕ ಮಾನವತಾವಾದಿ ನೆಲೆಯ ನವೀನ ರಾಷ್ಟ್ರೀಯತೆಯನ್ನು ಅಭಿವ್ಯಕ್ತಿಸುವುದನ್ನು ಕಾಣುತ್ತೇವೆ.

“೧೮೯೩ ನೆಯ ಇಸವಿ ಸೆಪ್ಟೆಂಬರು ೧೧ನೇಯ ತೇದಿ ಸೋಮವಾರ ತೀರ್ಥಹಳ್ಳಿಯ ಪಾದ್ರಿ ಅಥವಾ ಉಪದೇಶಿ ಜವರತ್ನಯ್ಯ ಕಾಡುದಾಟಿ, ಆಗ ತಾನೆ ಕಳೆಕಿತ್ತು ತೆವರು ಕುಯ್ಲಾಗಿದ್ದ ಗದ್ದೆಕೋಗಿನ ಅಂಚುಗಳನ್ನು ಹತ್ತಿ ಹಾರಿ, ತೋಟದ ಬೇಲಿಯ ತಡಬೆಯನ್ನು ಎಚ್ಚರಿಕೆಯಿಂದ ಏರಿ ಇಳಿದು, ಅಡಕೆ ಮರದ ಮೇಲೆ ಅಡೆಹಳ್ಳವನ್ನು ಉತ್ತರಿಸಿ, ಮನೆಯೆಡೆಯ ಕಣದ ಬೇಲಿಯೊಡ್ಡಿಗೆ ಹಾಕಿದ್ದ ಮೇಲೆ ಅಡೆಹಳ್ಳವನ್ನು ಉತ್ತರಿಸಿ, ಮನೆಯೆಡೆಯ ಕಣದ ಬೇಲಿಯೊಡ್ಡಿಗೆ ಹಾಕಿದ್ದ ಉಣುಗೋಲನ್ನು ಸರಿಸಿ, ಸಿಂಧುವಳ್ಳಿ ಮನೆಗೆ ಪ್ರವೇಶಿಸಿದಂದು ತಾನು ಎಂತಹ ಲೋಕಪ್ರಸಿದ್ಧವಾಗಲಿರುವ ಜಗದ್ ಭವ್ಯ ಮಹದ್ ಘಟನೆಯೊಂದರೊಡನೆ ಪ್ರತಿಸ್ಪರ್ಧಿಯಾಗಿದ್ದೇನೆ ಎಂಬುದನ್ನು ಅರಿತಿರಲಿಲ್ಲ; ಆ ದಿನವೇ ಕ್ರೈಸ್ತಮತ ಶ್ರದ್ಧೆಯ ಮತ್ತು ಮಿಷನರಿ ಮತಾಂಧತೆಯ ಶಕ್ತಿಕೇಂದ್ರವಾಗಿದ್ದ ಅಮೆರಿಕಾ ದೇಶದ ಚಿಕಾಗೋ ನಗರದಲ್ಲಿ ನೆರೆದಿದ್ದ ಸರ್ವಧರ್ಮ ಸಮ್ಮೇಳನದಲ್ಲಿ ಸ್ವಾಮಿ ವಿವೇಕಾನಂದರು ಹಿಂದೂಧರ್ಮದ ಮತ್ತು ವೇದಾಂತ ದರ್ಶನದ ಮಹೋನ್ನತಿಯನ್ನು ವಿಶ್ವವೈಶಾಲ್ಯವನ್ನೂ ತಮ್ಮ ಸಿಂಹಕಂಠದಿಂದ ಘೋಷಿಸಿದ್ದರೂ, ಅದನ್ನು ಆಲಿಸಿದ್ದ ಅನ್ಯಧರ್ಮೀಯ ವಿದ್ವಜ್ಜನ ಸಮೂಹವು ಆನಂದೋನ್ಮತ್ತವಾಗಿ ಜಯಘೋಷ ಮಾಡಿತ್ತು! ಹಿಂದೂಧರ್ಮ ಮತ್ತು ವೇದಾಂತ ದರ್ಶನದ ದಿಗ್ವಿಜಯ ಧ್ವಜ ಗಗನ ಚುಂಬಿಯಾಗಿ ಏರಿ ಹಾರಿ ಲೋಕಲೋಚನಗಳನ್ನೆ ಬೆರಗುಗೊಳಿಸಿತ್ತು! ವಿಂಧ್ಯ ಹಿಮಾಚಲ ಸಹ್ಯಾದ್ರಿಗಳಲ್ಲಿಯೂ ಆ ದಿವ್ಯಧ್ವನಿ ಅನುರಣಿತವಾಗಿತ್ತು.

ಆಗಿತ್ತೆ ? ಎಲ್ಲಿ ಆಗಿತ್ತು ? ಹಾಗಿದ್ದರೆ ಉಪದೇಶಿ ಜೀವರತ್ನಯ್ಯ ಸಿಂಧುವಳ್ಳಿ ಚಿನ್ನಪ್ಪಗೌಡರನ್ನು ಕಿಲಸ್ತರ ಜಾತಿಗೆ ಸೇರಿಸಲು ಎಂದಿಗಾದರೂ ಸಾಧ್ಯವಾಗುತ್ತಿತ್ತೆ ? ನಿಜ ಅವರಿನ್ನೂ ಸೇರಿರಲಿಲ್ಲ; ಆದರೆ, ದೀವದಾನೆ ಕಾಡಾನೆಯನ್ನು ಆಕರ್ಷಿಸಿ ಖೆಡ್ಡಾಕ್ಕೆ ಕೆಡಹಲು ಪ್ರಯತ್ನಿಸುವಂತೆ, ಪಾದ್ರಿ ಜೀವರತ್ನಯ್ಯ ಚಿನ್ನಪ್ಪನ ಕಾಲಡಿಯ ಕುರುಡು ಆಚಾರ ಮತ್ತು ಮೂಢ ನಂಬಿಕೆಗಳ ಭೂಮಿಯನ್ನು ಸಡಿಲಗೊಳಿಸಿ, ಅಗೆದು ತೆಗೆದು, ಕ್ರೈಸ್ತಮತದ ಖೆಡ್ಡಾ ಕಂದವನ್ನು ಮೆಲ್ಲಗೆ ನಿರ್ಮಿಸುತ್ತಿದ್ದನು.

ಅತ್ತ ಉತ್ತರಾರ್ಧಗೋಲದ ಬಹುದೂರ ಸಾಗರದಾಚೆಯ ಒಂದು ಆಧುನಿಕ ನಾಗರೀಕತೆಯ ಮತ್ತು ವೈಜ್ಞಾನಿಕ ಪ್ರಗತಿಯ ಶ್ರೀಮಂತ ದೇಶದಲ್ಲಿ ಪ್ರಪ್ರಾಚೀನ ಭಾರತ ಸಂಸ್ಕೃತಿಯ ಸರ್ವೋತ್ತಮ ಪ್ರತಿನಿಧಿಯೊಬ್ಬನು ವೇದಾಂತ ದರ್ಶನದ ಮೇಲೆ

ನಿಂತಿರುವ ಸನಾತನ ಹಿಂದೂಧರ್ಮದ ಸರ್ವೋತ್ಕೃಷ್ಟತೆಯನ್ನು ಅಧಿಕಾರವಾಣಿಯಿಂದ ಪ್ರಸಾರ ಮಾಡುತ್ತಿದ್ದಾಗಲೇ, ಅದನ್ನೆಲ್ಲ ಸದ್ದುಗದ್ದಲವಿಲ್ಲದೆ ಮೂದಲಿಸುವಂತೆ, ಯಃಕಶ್ಚಿತ ಪಾದ್ರಿಯೊಬ್ಬನು ಅದರಲ್ಲಿಯೂ ನೇಟಿವ್ ಪಾದ್ರಿ– ಘೋರಾರಣ್ಯಮಯವಾದ ಸಹ್ಯಾದ್ರಿ ಶ್ರೇಣಿಯ ಮಲೆನಾಡಿನ ಕೊಂಪೆಯ ಅಜ್ಞ ಬೇಸಾಯಗಾರನೊಬ್ಬನಿಗೆ ಹಿಂದೂಧರ್ಮದ ಅನಾಚಾರ, ಅವಿವೇಕ, ಸಂಕುಚಿತ ಮನೋಭಾವ, ಜಾತಿ ಮತ ಪಕ್ಷಪಾತ, ಬ್ರಾಹ್ಮಣರ ತಿರಸ್ಕಾರ, ಶೂದ್ರರ ದೈನ್ಯ, ಅದೋಗತಿ, ಕಲ್ಲುಮಣ್ಣು ಮರ ದೆವ್ವಗಳ ಪೂಜೆ ಇತ್ಯಾದಿಗಳನ್ನೂ,– ಯೇಸುಕ್ರಿಸ್ತನ ಮತ್ತು ಕ್ರೈಸ್ತಮತದ ಪರೋಪಕಾರ, ಪರಾನುಕಂಪನ ನೀತಿ, ತ್ಯಾಗ, ಭಕ್ತಿ, ಉದ್ಧಾರಕ ಸಾಮರ್ಥ್ಯ ಇತ್ಯಾದಿಗಳನ್ನೂ ಕುರಿತು ಮನಮುಟ್ಟುವಂತೆ ಉದೇಶ ಮಾಡುತ್ತಿದ್ದನು. ಗೌಡನ ಮನೆಯ ಚಾವಡಿಯಲ್ಲಿಯೆ ಕುಳಿತು, ಅವನ ಗದ್ದೆ, ತೋಟ, ಅಂಗಳದ ತೊಳಸಿಕಟ್ಟೆಯ ದೇವರು ಮತ್ತು ಎದುರಿಗೇ ಕಾಣುತ್ತಿದ್ದ ಭೂತದ ಬನ– ಇವುಗಳ ಇದಿರಿನಲ್ಲಿಯೆ !

ಅಮೆರಿಕಾದ ಚಿಕಾಗೋ ಬಹುದೂರದಲ್ಲಿದ್ದಿರಬಹುದು ? ವಿವೇಕಾನಂದರ ಉತ್ತಾಲ ಧ್ವನಿ ಮಲೆನಾಡಿ ಕೊಂಪೆಗೆ ಮುಟ್ಟದಿದ್ದಿರಬಹುದು ? ಆದರೆ ಸಮೀಪದಲ್ಲಿಯೇ ಇದ್ದುವಲ್ಲ – ಶೃಂಗೇರಿ, ಧರ್ಮಸ್ಥಳ, ಉಡುಪಿ ಇತ್ಯಾದಿ ಪವಿತ್ರ ಕ್ಷೇತ್ರಗಳ ಗುರುಪೀಠಗಳು ? ಅವೇನು ಮಾಡುತ್ತಿದ್ದವು ? ಅದ್ವೈತ ತತ್ವದಿಂದ ಬೌದ್ಧಧರ್ಮವನ್ನೆ ಭರತವರ್ಷದಿಂದ ಅಟ್ಟಿ ವೈದಿಕ ಧರ್ಮ ಸ್ಥಾಪನೆ ಮಾಡಿದನೆಂದು ಹೇಳಲಾಗುತ್ತಿರುವ ಆಚಾರ್ಯ ಶಂಕರನ ಮೂಲ ಪೀಠದಲ್ಲಿ ವಿರಾಜಮಾನರಾಗಿದ್ದ ಸನ್ಯಾಸಿ ವರೇಣ್ಯರು ಏನು ಮಾಡುತ್ತಿದ್ದರು ?

ಅಜ್ಞರೂ ಮೌಢ್ಯಾಂದರೂ ಆಗಿದ್ದ ಶೂದ್ರವರ್ಗದ ಸಾಮಾನ್ಯ ಜನರಿಂದ ಪಾದ ಪೂಜೆ ಮಾಡಿಸಿಕೊಳ್ಳುತ್ತಿದ್ದರೂ, ಅಡ್ಡಪಲ್ಲಕ್ಕಿ ಸೇವೆ ಸಲ್ಲಿಸಿಕೊಳ್ಳುತ್ತಿದ್ದರು; ದಾನ, ದಕ್ಷಿಣೆ, ಸಾಷ್ಟಾಂಗ ನಮಸ್ಕಾರಗಳನ್ನೂ ಸ್ವೀಕರಿಸುತ್ತಿದ್ದರು. ಆಶೀರ್ವಾದ ಮಾಡುತ್ತಿದ್ದರು! ತಮ್ಮ ತಮ್ಮ ಪಂಗಡಕ್ಕೆ ಸೇರಿದ ಬ್ರಾಹ್ಮಣೋತ್ತಮರಿಗೆ, ಭೂಸೂರಿಗೆ, ಸಮಾರಾಧನೆ ಮಾಡಿಸಿ ಹೊಟ್ಟೆ ತುಂಬಿಸುತ್ತಿದ್ದರು. ಬಹುಶಃ ಶಾಸ್ತ್ರಕ್ಕಾಗಿ ತಮ್ಮ ವರ್ಗಕ್ಕೆ ಸೇರಿದ ವಿದ್ವಾಂಸರನ್ನ ನೆರಪಿ ವಾಕ್ಯಾಥಃ ಏರ್ಪಡಿಸುತ್ತಿದ್ದರೂ ಇರಬಹುದು. ಶೂದ್ರರು ವೇದಗಳನ್ನು ಓದುವುದಿರಲಿ, ಕೇಳಿದರೂ ಅವರ ಕಿವಿಗೆ ಸೀಸ ಕರಗಿಸಿ ಹೊಯ್ಯುವ

ನರಕ ಶಿಕ್ಷೆಯನ್ನು ವಿಧಿಸಿ, ಅದಕ್ಕೆ ಮನುಧರ್ಮ ಶಾಸ್ತ್ರವೆಂದು ಹೆಸರಿಟ್ಟವರು ಶೂದ್ರರಿಗೆ ವೇದಾಂತ ಬೋಧನೆ ಮಾಡುವ ಪಾಪಕ್ಕೆ ಏಕೆ ಪಕ್ಕಾಗುತ್ತಾರೆ?"[೩].

ಇಲ್ಲಿ ಜೀವರತ್ನಯ್ಯನ ಮತಾಂತರ ಪ್ರಕ್ರಿಯೆಗೆ ಅಮೇರಿಕಾದ ಚಿಕಾಗೋದಲ್ಲಿ ಭಾರತೀಯ ಸಂಸ್ಕೃತಿಯ ಸರ್ವೋತ್ತಮ ಪ್ರತಿನಿಧಿಯಾದ ಸ್ವಾಮಿ ವಿವೇಕಾನಂದರು ಸನಾತನ ಹಿಂದೂ ಧರ್ಮದ ವೇದಾಂತ ದರ್ಶನ, ಸರ್ವೋತ್ಕೃಷ್ಟತೆಯನ್ನು ಸಾಗರದಾಚೆ ಪ್ರಸಾರ ಮಾಡುವುದನ್ನು ಮುಖಾಮುಖಿಯಾಗಿಸುತ್ತದೆ. ಇಲ್ಲಿ ಸ್ಥಳೀಯ ಧರ್ಮದ ಅನಾಚಾರಗಳಲ್ಲಿ ಸಿಕ್ಕಿ ನರಳುತ್ತಿದ್ದ ಮಲೆನಾಡಿನ ಪ್ರತಿಷ್ಠಿತ ಮನೆತನಕ್ಕೆ ಸೇರಿದ ಚಿನ್ನಪ್ಪಗೌಡರಂತವರನ್ನು ಜೀವ ರತ್ನಯ್ಯ ಮತಾಂತರಗೊಳಿಸಲು ಬರುತ್ತಾನೆ. ಅದಕ್ಕಾಗಿ ಪರಂಪರೆಯ ರಕ್ಷಣೆಯಲ್ಲಿ ತೊಡಗಬೇಕಾದ ಜವಾಬ್ದಾರಿಯನ್ನು ನಿಭಾಯಿಸದ ಮಠ-ಮಾನ್ಯಗಳ ಅನಾಚಾರ, ಅವಿವೇಕ, ಸಂಕುಚಿತ ಮನೋಭಾವ, ಜಾತಿಮತ ಪಕ್ಷಪಾತಗಳಂತಹ ವ್ಯವಸ್ಥೆಯ ವಿರುದ್ಧ ಈ ರಾಷ್ಟ್ರೀಯ ಪ್ರಜ್ಞೆ ಪ್ರತಿಭಟಿಸುತ್ತದೆ.

ಕುವೆಂಪು ಕಾದಂಬರಿಗಳು ಬ್ರಾಹ್ಮಣ ವಲಯ ಗ್ರಾಮೀಣ ಕೆಳವರ್ಗವನ್ನು ಮೂಢ ಮತಾಚಾರಗಳಿಗೆ ತಳ್ಳಿದ್ದ ಸಂದರ್ಭವನ್ನು ಕ್ರೈಸ್ತ ಪಾದ್ರಿಗಳು ತಮಗೆ ಲಾಭದಯಕವಾಗುವಂತೆ ಬಳಸಿಕೊಳ್ಳುತ್ತಾ ತಮ್ಮ ಧರ್ಮಕ್ಕೆ ಸೇರಿಸಿಕೊಳ್ಳುವ ಕಾರ್ಯವನ್ನು ಚಿತ್ರಿಸುತ್ತವೆ. ಅಂದರೆ ಒಂದು ಧರ್ಮದ ಕ್ರೌರ್ಯಕ್ಕೆ ಸಿಲುಕಿದ್ದ ಕೆಳವರ್ಗದವರನ್ನು ಅಂತದ್ದೇ ಸ್ವಾರ್ಥ ಸಾಧನೆಯ ಆಶಯಗಳಿಂದ ಕೂಡಿದ ಮತ್ತೊಂದು ಧರ್ಮಕ್ಕೆ ಸೇರಿಸಿಕೊಳ್ಳುವುದನ್ನು ಕುವೆಂಪು ವಿಶ್ಲೇಷಿಸುತ್ತಾರೆ. ಮಿಶನರಿಗಳು ಮತಾಂತರ ಮಾಡುವ ಪ್ರಸ್ತಾಪಗಳು ಬಂದಾಗಲೆಲ್ಲ ಕಾದಂಬರಿಗಳು ಸ್ವಧರ್ಮದ ಸಮರ್ಥನೆಗೆ ತೊಡಗುತ್ತವೆ. ಆದರೆ ಆಂತರಿಕವಾದ ಪುರೋಹಿತಶಾಹಿ-ಶೂದ್ರವರ್ಗಗಳ ನಡುವೆ ಸಂಘರ್ಷವೇರ್ಪಟ್ಟಾಗ ಕಾದಂಬರಿಗಳು ತೆಗೆದುಕೊಳ್ಳುವ ನಿಲುವು ಬೇರೆ ರೀತಿಯದ್ದಾಗಿರುತ್ತದೆ.

"ಆಗತಾನೆ ಹಳೆಯ ತರಹದ ಕೂಲಿಮಠಗಳ ಕಾಲವೂ ಹಳೆಯ ವಿದ್ಯಾಭ್ಯಾಸ ಪದ್ಧತಿಯೂ ಮುಕ್ತಾಯಗೊಂಡು, ಆಂಗ್ಲೇಯರ ಆಡಳಿತ ರೀತಿಯೂ ಇಂಗ್ಲೀಷಿನ ಪ್ರಭಾವವೂ ಮೊಳೆಯುತ್ತಿದ್ದ ಸಂಧಿಸಮಯ. ಮಲೆನಾಡಿಗೆ ಆ ಹೊಸ ಪ್ರಭಾವದ

ಮುಂಬೆಳಕನ್ನು ಮೊತ್ತ ಮೊದಲು ತರುವುದರಲ್ಲಿ ಕ್ರೈಸ್ತ ಪಾದ್ರಿಗಳ ಕಾರ್ಯ ಗಣನೀಯವಾಗಿತ್ತು, ಶ್ಲಾಘನೀಯವಾಗಿತ್ತು. ತಮ್ಮ ಮತಕ್ಕೆ ಜನರನ್ನು ಸೇರಿಸಿಕೊಳ್ಳುವ ಧಾರ್ಮಿಕ ಪ್ರಯತ್ನಕ್ಕೆ ಪೀಠಿಕೆಯಾಗಿತ್ತು. ಈ ಲೌಖಿಕ ಸೇವಾ ಕರ್ಮ, ಸಾಮಾನ್ಯ ಜನ ಬಹುಕಾಲದಿಂದಲೂ ಹಿಂದೂಧರ್ಮದ ಹೆಸರಿನಲ್ಲಿ ಬ್ರಾಹ್ಮಣರು ಒಡ್ಡಿದ ಮೂಢ ಮತಾಚಾರಗಳ ಕೂಣಿಗೆ ಸಿಕ್ಕಿಬಿದ್ದಿದ್ದರು. ಅವರನ್ನು ಆ ಕೂಣಿಯಿಂದ ತಪ್ಪಿಸಿ ತಕ್ಷಿಸುವ ನೆಲದಲ್ಲಿ ಕ್ರೈಸ್ತ ಪಾದ್ರಿಗಳು ತಮ್ಮ ಮತದ ಬಲೆಯನ್ನು ಬೀಸಿ ಅದರೊಳಗೆ ಹಾರಿ ಬೀಳುವ ಪ್ರಾಣಿಗಳನ್ನು ಭಕ್ಷಿಸುವ ಅಥವಾ ಅವರದ್ದೇ ರೀತಿಯಲ್ಲಿ ರಕ್ಷಿಸುವ ಅಭಿಸಂಧಿಯನ್ನಿಟ್ಟುಕೊಂಡಿದ್ದರು"[೩].

ಹೀಗೆ ಕುವೆಂಪುರವರ ಕಾದಂಬರಿಗಳು ಅನ್ಯಧರ್ಮವೊಂದು ತನ್ನನ್ನು ಪ್ರಭಾವಿಸುತ್ತಿರುವ ರೀತಿಯನ್ನು ಹಾಗೆಯೇ ಇಲ್ಲಿರುವ ಜಾತಿ ಏಣಿಶ್ರೇಣೀಕರಣ ಹಾಗೂ ಮೌಢ್ಯಗಳನ್ನು ತಿರಸ್ಕರಿಸುತ್ತಾ ಹೊಸ ರಾಷ್ಟ್ರ ಪ್ರಜ್ಞೆಯನ್ನು ಮೂಡಿಸುತ್ತದೆ. ಅವರ 'ಕಾನೂರು ಹೆಗ್ಗಡಿತಿ' ಹಾಗೂ 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳು ದಟ್ಟವಾದ ಮಲೆನಾಡಿನ ಪ್ರಾದೇಶಿಕ ವಿವರಣೆಗಳಿಂದ ಕೂಡಿರುವುದೇ ಅವಕ್ಕೆ ರಾಷ್ಟ್ರೀಯತಾ ಆಯಾಮವನ್ನು ತಂದುಕೊಡುತ್ತದೆ. ಕ್ರೈಸ್ತ ಮಿಶನರಿಗಳು ಮತ್ತು ಅವರ ಮತಾಂತರ ಚಟುವಟಿಕೆಗಳ ಖಂಡನೆಯೇ ಇಲ್ಲಿ ರಾಷ್ಟ್ರೀಯತೆಯನ್ನು ಎತ್ತಿಹಿಡಿಯುವ ತಂತ್ರವಾಗಿ ಬಳಕೆಯಾಗಿದೆ.

ನವೋದಯ ಕಾದಂಬರಿಗಳು ಹೊಸ ರಾಷ್ಟ್ರೀಯ ಕಲ್ಪನೆಗಳನ್ನು ಅಭಿವ್ಯಕ್ತಿಸುವುದಕ್ಕೆ ಅವು ಭಾರತೀಯ ಸುಧಾರಣಾವಾದಿ ಚಳುವಳಿಗಳಿಂದ ಪ್ರಭಾವಿತ ಗೊಂಡಿದ್ದುದನ್ನು ಕಾಣಬಹುದಾಗಿದೆ. ಗುಲ್ವಾಡಿ ವೆಂಕಟರಾಯರ 'ಇಂದಿರಾಬಾಯಿ' ಅಥವಾ 'ಸದ್ಧರ್ಮ ವಿಜಯ' ಅಂತಹ ದಟ್ಟ ಪ್ರಭಾವಕ್ಕೊಳಗಾದ ಮಹತ್ವದ ಕಾದಂಬರಿ. ಇದು ಸಾಮಾಜಿಕ ವಾಸ್ತವತೆಗಳನ್ನು ನೇರವಾಗಿ, ಮುಖಾಮುಖಿಯಾಗುವಂಥದ್ದು. ಅಂದಿನ ಸಾಮಾಜಿಕ ಸಮಸ್ಯೆಯಾಗಿದ್ದ ವಿಧವಾ ವಿವಾಹ ಪದ್ಧತಿಯನ್ನು ಕಥಾ ವಸ್ತುವಾಗಿ ಉಳ್ಳಂಥದ್ದು. ಇದರೊಳಗೆ ಪಾಶ್ಚಾತ್ಯರಿಂದ ನೇರವಾದ ಸುಧಾರಣೆಯ ಪ್ರಭಾವವನ್ನು ಪಡೆಯಲು ನಿರಾಕರಿಸುವ ಕಾದಂಬರಿ ಭಾರತೀಯ ಚಿಂತನೆಯಲ್ಲಿ ಅದು ಹರಳುಗಟ್ಟಿರುವ ನೆಲೆಯಿಂದ ಪ್ರಭಾವಿತಗೊಳ್ಳುತ್ತದೆ. ಇಲ್ಲಿ ವಸಾಹತುಶಾಹಿ ತಂದ ಆಧುನಿಕತೆಯ ಪ್ರತಿ ಉತ್ಪನ್ನವನ್ನ ಅನುಮಾನದಿಂದ

ನೋಡುವ ಕಾದಂಬರಿ ರಾಷ್ಟ್ರೀಯತೆಯನ್ನು ಎತ್ತಿಹಿಡಿಯುತ್ತದೆ. ಒಂದು ಕಡೆ ವಿಧವಾ ವಿವಾಹದಂತಹ ಪರಂಪರೆಯೊಳಗಿನ ಸಾಂಪ್ರದಾಯಿಕ ಪಿಡುಗನ್ನು ಹೋಗಲಾಡಿಸಬೇಕೆಂಬ ಮನೋಭಾವ ಹೊಂದಿದ್ದರೂ ಅದು ತನ್ನ ಸಾಂಪ್ರದಾಯಿಕ ಪರಂಪರೆಯನ್ನು ಬಿಟ್ಟುಕೊಡದೆ ಚಿಕಿತ್ಸಕ ಮನೋಭಾವನ್ನು ತೋರುತ್ತದೆ.

ಆಧುನಿಕತೆಯಿಂದ ಬಂದ ಸೀಮೆಎಣ್ಣೆಯನ್ನು ದೇವಸ್ಥಾನಗಳಲ್ಲಿಯಾಗಲಿ, ದೇವರ ಕೋಣೆಯಲ್ಲಾಗಲಿ ದೀಪಗಳನ್ನು ಉರಿಸಲು ಬಳಸಿದರೆ ದೇವರ ಕಲಾ ಸಾನಿಧ್ಯವೆಲ್ಲ ನಿಂತು ಹೋಗುತ್ತೆ ಎಂದು ಹೇಳುತ್ತಾ ತನ್ನ ಪರಂಪರೆಯೊಳಗೆ ಬರುತ್ತಿರುವ ಪ್ರತಿ ವಸ್ತುವನ್ನು ಇದು ಅನುಮಾನದಿಂದ ನೋಡುತ್ತದೆ. ಆ ಮೂಲಕ ಸ್ವಧರ್ಮ ಪ್ರತಿಪಾದನೆಯಲ್ಲಿ ತೊಡಗಿ ರಾಷ್ಟ್ರೀಯತೆಯೊಂದನ್ನು ಒತ್ತಿ ಹೇಳುತ್ತದೆ.

"ಇತ್ತಲಾಗಿ ಇಲ್ಲೊಬ್ಬ ಹೊಸಪಂಡಿತ ಬಂದಿದ್ದಾನಂತೆ ಅವನ ಹತ್ತಿರ ಧರ್ಮಮೇಸ್ತ್ರಿ ಎಂಬ ಗಾಜಿನ ನಳಿಕೆ ಇದೆಯಂತೆ. ಅದರಲ್ಲಿ ಪಾದರಸವೋ ಏನೋ ಇದೆಯಂತೆ. ಆ ನಳಿಕೆಯನ್ನು ರೋಗಿಯ ಬಾಯಿಯಲ್ಲಿ ಅಥವಾ ಕಂಕುಳಲ್ಲಿ ಕೆಲವು ನಿಮಿಷಗಳವರೆಗೆ ಇಟ್ಟು ಆ ಮೇಲೆ ತೆಗೆದು ನೋಡಿ ಜ್ವರ ಇಂತಿಷ್ಟೆ ಇದೆ ಎಂದು ನಿಶ್ಚಯಿಸುತ್ತಾನಂತೆ.

ಅಯ್ಯೋ ! ಬೇಡ ರಾಯರೇ, ಅವನನ್ನು ಕರೆಯಿಸುವುದು ಬೇಡ ! ಆ ನಳಿಕೆಯೆಂದರೇನೆಂದು ನಾನು ತಿಳಿಯದ್ದೆ ? ಜಾತಿ ಕೆಡಿಸುವುದಕ್ಕೆ ಪಾದ್ರಿಗಳು ಮಾಡಿದ ಕುಯುಕ್ತಿಯಲ್ಲದೆ ಬೇರೇನಲ್ಲ. ಮ್ಲೇಂಛರ ಬಾಯಿಯಲ್ಲಿಟ್ಟ ನಳಿಗೆಯನ್ನು ನಮ್ಮ ಬಾಯಿಯಲ್ಲಿಯೂ ಇಟ್ಟಮೇಲೆ ಜಾತಿಯೆಲ್ಲಿ ? ಅದಲ್ಲದೆ ಅದರೊಳಗಿರುವುದೆಂಬ ರಸವು ಪಾದರಸವೂ ಅಲ್ಲ, ಸಿದ್ಧರಸವೂ ಅಲ್ಲ, ಬರೇ ಗೋಮಾಂಸದ ಸತ್ವವಲ್ಲವೇ ? ಅದನ್ನು ಮೆಲ್ಲಗೆ ನಮ್ಮ ಬಾಯಿಯಲ್ಲಿ ಹಾಕಬೇಕೆಂದು ಮಾಡಿದ ಕುಯುಕ್ತಿತಾನೇ ಅಯ್ಯೋ ! ಈ ಪಾದ್ರಿಗಳಿಗೆ ದೇವರು ಯಾವ ಸ್ಥಳವನ್ನು ನಿಶ್ಚಯಿಸಿಟ್ಟಿದ್ದಾನಪ್ಪ !

ಹೌದೆ ! ಏನೆಲ್ಲ ಕುಯುಕ್ತಿಗಳು ! ಆ ವೈದ್ಯನ ಹತ್ತಿರ ಸೆಟ್ಟಿಯ ಕೋಪವೆಂಬ ಚೀನಿ ಬಜಂತರಿಯಂತೆ ಕಾಣಿಸುವ ಮತ್ತೊಂದು ಸಾಧನವಿದೆಯಂತೆ ಅದರ ಗುಟ್ಟೇನು ಬಲ್ಲಿರಾ ?

ಅದೋ ? ಅದು ಮಂಕುಬೂದಿ ಹಚ್ಚುವ ಪಾದ್ರಿಗಳ ಮತ್ತೊಂದು ಕುಯುಕ್ತಿ, ಏನಾದರೂ ಅಸ್ಪಷ್ಟವೆಂದಾಗ ಅದನ್ನು ಅಯ್ಯೋ ! ಆ ಕರ್ಮವನ್ನು ಬಾಯಿಂದುಚ್ಚರಿಸುವುದೇ ಅಧರ್ಮ ! ಹೇಗೂ ಆಗಲಿ, ಅಂತಹದರ ತಳ್ಳಿಯೇ ನಮಗೆ ಬೇಡ" ಎನ್ನುವ ಮೂಲಕ ಸ್ಥಳೀಯತೆಯನ್ನು ಎತ್ತಿಹಿಡಿಯುತ್ತಾರೆ.

ಸ್ವಾತಂತ್ರ್ಯ ಕಾಲದಲ್ಲಿ ರಾಷ್ಟ್ರೀಯತೆಯ ಶಕ್ತಿ ಅಸಾಮಾನ್ಯವಾಗಿತ್ತು. ವಸಾಹತುಶಾಹಿಯ ವಿರುದ್ಧ ಪ್ರತಿಭಟಿಸುವಲ್ಲಿ ಇದು ಹೆಚ್ಚು ಸಹಕಾರಿಯಾದದ್ದು ಹಾಗೂ ಅಂತಿಮವಾಗಿ ಬಳಕೆಗೊಂಡ ಪರಿಕಲ್ಪನೆಯಾಗಿದೆ. ಅಂದರೆ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾರತೀಯರೆಲ್ಲ ಒಂದೆಂಬ ಭಾವನೆಯನ್ನು ಮೂಡಿಸಿ ಬ್ರಿಟೀಷರ ವಿರುದ್ಧ ಬಳಸಿದ ಅಸ್ತ್ರವಾದರೆ ನಂತರದಲ್ಲಿ ಪ್ರಜಾಪ್ರಭುತ್ವ, ಸಮಾಜವಾದಿ ರಾಷ್ಟ್ರಪ್ರಭುತ್ವ ನಿರ್ಮಾಣದ ಮುಖ್ಯ ಯೋಜನೆಯಾಗಿತ್ತು. ಅಂದು ಇದು ಜನರ ಆಶೋತ್ತರಗಳ ಸಂಕೇತವಾಗಿತ್ತು.

ಕುವೆಂಪು ಕಾದಂಬರಿಗಳಲ್ಲಿ ಹಾಗೂ ಕಾರಂತರ ಕಾದಂಬರಿಗಳಲ್ಲಿ ನೇರವಾಗಿ ಇಂಥ ಅಪಾರ ಜನಶಕ್ತಿಯ ರಾಷ್ಟ್ರೀಯತೆಯ ಅನುಭವಗಳಾಗುವುದಿಲ್ಲ. ತುಂಬಾ ಕುತೂಹಲಕಾರಿಯಾದ ಸಂಗತಿಯೆಂದರೆ ಗುತ್ತಿ, ಚೋಮ ನಂತಹ ಪಾತ್ರಗಳು ಇಂಥ ರಾಷ್ಟ್ರೀಯತೆಯನ್ನು ಎದುರಾದದ್ದು. ಗುತ್ತಿಗೆ ಯಾವ ಊರಿನ ನೆಲೆಯೂ ಇಲ್ಲ, ಅವನದೇ ಆದ ದೇಶ, ಊರು, ಮನೆಯೆಂಬುದಿಲ್ಲ, ಚೋಮನ ನೆಲದ ಪ್ರಶ್ನೆ ಕಾದಂಬರಿಯಲ್ಲಿ ಕೊನೆಗೂ ಈಡೇರುವುದಿಲ್ಲ. ಇಲ್ಲಿ ಗುತ್ತಿ ಮತ್ತು ಚೋಮರು ಉದ್ದಕೂ ನೆಲೆಕಂಡುಕೊಳ್ಳಲು ಮಾಡುವ ಹೋರಾಟಗಳು ಪ್ರತ್ಯಕ್ಷವಾಗಿ ಕಾಣದಿದ್ದರೂ ಅವರ ಸಿಟ್ಟು, ರೋಷ ಮುಂತಾದವುಗಳೇ ರಾಷ್ಟ್ರೀಯತೆಯನ್ನು ವಿಡಂಬನೆಗೆ ಒಳಗು ಮಾಡುತ್ತವೆ. ಹಾಗಾಗಿ ಪ್ರಜಾಪ್ರಭುತ್ವ ಸಮಾಜದವಾದ ರಾಷ್ಟ್ರೀಯತೆಗಳನ್ನು ಕುವೆಂಪು ಹಾಗೂ ಕಾರಂತರ ಕಾದಂಬರಿಗಳು ಒತ್ತಾಯಿಸುತ್ತವೆ. ಇಲ್ಲಿ ಗಾಂಧಿ ಚಿಂತನೆಯ,

ವಿವೇಕಾನಂದ, ರಾಮಕೃಷ್ಣ ಪರಮಹಂಸರ ಪ್ರಭಾವಿತ ರಾಷ್ಟ್ರೀಯತೆ ಸುಧಾರಣಾವಾದಿ ನಿಲುವುಗಳು ರಾಷ್ಟ್ರೀಯತೆಯನ್ನು ರೂಪಿಸುತ್ತವೆ.

ನವೋದಯದ ಬರಹಗಾರರಲ್ಲಿ ಮೂಡಿದ ರಾಷ್ಟ್ರೀಯತೆಯು ಗಾಂಧಿ ಪ್ರಣೀತವಾದದ್ದು. ಗಾಂಧಿಯ ಧರ್ಮರಾಜ್ಯದ ಪರಿಕಲ್ಪನೆಯಲ್ಲಿ ಮೇಲ್ಜಾತಿಗಳು ತಮ್ಮ ತ್ಯಾಗದಿಂದ ಅರ್ಥಪೂರ್ಣವಾಗಬೇಕಾದ ಅನಿವಾರ್ಯತೆ ಇದೆ. ಹಾಗಾಗಿಯೇ ಕುವೆಂಪು ಅವರ ಜಮೀನ್ದಾರ ಕಾನೂರು ಚಂದ್ರಯ್ಯ ಗೌಡರಂಥವರು ರಾಷ್ಟ್ರೀಯತೆಯನ್ನು ಆರಂಭಿಸಬಲ್ಲ ವ್ಯಕ್ತಿಗಳಾಗುತ್ತಾರೆ.

ಇದಕ್ಕೆ 'ಕಾನೂರು ಹೆಗ್ಗಡತಿ'ಯಲ್ಲಿ ಕಾನೂರು ಚಂದ್ರಯ್ಯಗೌಡರ ಮನೆಯ ದರ್ಬಾರನ್ನು ವರ್ಣಿಸುವಲ್ಲಿ ಈ ಅನುಭವ ವ್ಯಕ್ತವಾಗುತ್ತದೆ.

"ಅಂಗಳದ ಮೂಲೆಯಲ್ಲಿ ಅಡಿಗೆ ಒಲೆ, ಪಕ್ಕದಲ್ಲಿ ಮಣ್ಣಾದ ನೇಗಿಲು, ಜಗುಲಿಯ ಮೇಲೆ ಒಂದು ಹೆಗ್ಗಡಿಯಾರದ ಸುತ್ತಲೂ ಕೆಲವು ತಿರುಪತಿಯ ಬಣ್ಣದ ಚಿತ್ರಗಳಿದ್ದವು. ಜೊತೆಗೆ ರವಿವರ್ಮನ ಬಣ್ಣದ ದೇವತೆಗಳೂ ಕುಳಿತಿದ್ದರು. ಒಬ್ಬಿಬ್ಬರ ದೇಶಭಕ್ತರ ಪಟಗಳು, ಭಾರತಾಂಬೆ ಚಿತ್ರಪಟವೂ ಅಲ್ಲಿದ್ದವು. ಸರ್ವವ್ಯಾಪಿಯಾಗುತ್ತಿದ್ದ ರಾಷ್ಟ್ರೀಯ ಮಹಾಸಭೆಯ ಪ್ರಭಾವವು ತನ್ನ ಕ್ಷೇಮಕರವಾದ ಆಶೀರ್ವಾದ ಹಸ್ತವನ್ನು ಆ ಮಲೆನಾಡಿನ ಮೂಲೆಗೂ ಚಾಚಿತ್ತು ಎಂಬುದಕ್ಕೆ ಸ್ಪಷ್ಟವಾದ ಸಾಕ್ಷಿಯಾಗಿ, ಆ ಮನೆಯಲ್ಲಿ ಪ್ರಾಚೀನ ನವೀನಗಳ ಸ್ನೇಹವೋ ಸಮರವೋ ನಡೆಯತೊಡಗಿದಂತೆ ತೋರುತ್ತಿತ್ತು."[೫]

ಇಂಥ ಜಮೀನ್ದಾರಿ ವ್ಯವಸ್ಥೆಯೊಳಗೂ ಕುವೆಂಪು ತಾಳುವ ಇಂಥ ಸಾಮಾಜಿಕ ನ್ಯಾಯದ ನಿಲುವು ಶೂದ್ರ ಸಮಾಜದ ಪರವಾಗಿದೆ. ಬಹುಶಃ ಶೂದ್ರ ಸಮಾಜ ಎದುರಾಗಲು ಬಯಸುವ ರಾಷ್ಟ್ರೀಯತೆಯನ್ನು ಮೀರಿದ ಉದಾರ ಮಾನವತಾವಾದ ಕುವೆಂಪು ಅವರಲ್ಲಿದೆ. ಹಾಗಾಗಿ ಕುವೆಂಪುರವರಿಗೆ ರಾಷ್ಟ್ರೀಯತೆ ಅಂದರೆ ವಿಮೋಚನೆ, ಕಾನೂನಿನ ಸಮಾಜದ ವಾಸ್ತವ ರೂಪದಲ್ಲಿ ಸಾಧಿಸುವುದಾಗಿದೆ.

ನವೋದಯ ಲೇಖಕರಿಗೆ ಮತಾಂತರ ಕುರಿತಂತೆ ಪರ-ವಿರೋಧದ ಸರಳೀಕೃತ ನೆಲೆಗಳಿಲ್ಲ. ಈ ವಿದ್ಯಾಮಾನದ ಸಂಕೀರ್ಣತೆಯನ್ನು ಅವರು ಎಲ್ಲ ಸ್ತರಗಳಲ್ಲೂ ಗಮನಿಸಲು ಪ್ರಯತ್ನಿಸುತ್ತಾರೆ. ಕಾರಂತರ 'ಚೋಮನದುಡಿ' ಕಾದಂಬರಿಯು ಶೋಷಿತ ವ್ಯಕ್ತಿಯ ಬದುಕಿನ ವಾಸ್ತವಗಳ ಮೂಲಕ ಇದಕ್ಕೆ ಎದುರಾಗುತ್ತದೆ. "ಕುವೆಂಪುರವರಿಗೆ ಆಮಿಷಗಳ ಮೂಲಕ ದುರ್ಬಲ ಮನಸ್ಸಿನ ಜನರನ್ನು ಮತಾಂತರ ಗೊಳಿಸುವುದನ್ನು ಒಪ್ಪುವುದಿಲ್ಲ. ಆದರೆ ಮತಾಂತರದಿಂದ ಮೂಡಿಬರುವ ಸಾಮಾಜಿಕ ಚಲನೆ-ತಿಳುವಳಿಕೆ, ಹೊಸ ರೀತಿಯ ಜ್ಞಾನದ ಪ್ರವೇಶ ಇವುಗಳನ್ನು ಸ್ವಾಗತಿಸುತ್ತಾರೆ. ರಾಮಕೃಷ್ಣ-ವಿವೇಕಾನಂದರ ದರ್ಶನವನ್ನು ಒಪ್ಪುವ ಕುವೆಂಪು ಮೂಢನಂಬಿಕೆ, ಜಾತಿ ಪದ್ಧತಿಯನ್ನು ವಿರೋಧಿಸುತ್ತಾರೆ. ಮತಾಂತರದ ಪ್ರಯತ್ನಗಳು ಇತಿಹಾಸದ ಒಂದು ಘಟ್ಟದಲ್ಲಿ ಅನಿವಾರ್ಯವೂ, ಅಪೇಕ್ಷಣೀಯವೂ ಆದಂತಹ ಒಂದು ಪ್ರಕ್ರಿಯೆ ಎಂಬುದನ್ನು ಕೂಡ ಸೂಚಿಸುತ್ತಾರೆ."[೬].

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ವಿವೇಕಾನಂದರು ಹೇಳಿದರೆನ್ನಲಾದ ಕೆಲವು ಮಾತುಗಳನ್ನು ಸರ್ವಸಾಕ್ಷಿತ್ವ ನಿರೂಪಣೆಯ ದಾಖಲು ಮಾಡುತ್ತದೆ. ವಿವೇಕಾನಂದರು ಕ್ರಿಸ್ಟೈನ್‌ಗೆ ಹೇಳುತ್ತಾರೆ;

"ನೋಡು, ಸೋದರಿ, ನಾನು ಇಂಡಿಯಾದಿಂದ ಇಲ್ಲಿಗೆ ಬಂದು ನಿಮಗೆ ವೇದಾಂತ ಬೋಧನೆ ಮಾಡಿ, ಸರ್ವಧರ್ಮ ಸಮನ್ವಯ ದೃಷ್ಟಿಯನ್ನು ನೀಡಿ, ನಿಮ್ಮನ್ನು ಮತಾಂತರಗೊಳಿಸುವ ರೂಕ್ಷಬರ್ಬರವಾದ ಕಿರಾತ ನೀತಿಗೆ ಕೈಹಾಕದೆ, ಕ್ರೈಸ್ತರಿಗೆ, ಯೆಹೂದ್ಯರಿಗೆ, ಮೆಥಡಿಸ್ಟರಿಗೆ, ಪ್ಯೂರಿಟನ್ನರಿಗೆ, ಕ್ಯಾಥೋಲಿಕ್ಕರಿಗೆ, ಅವರವರ ಭಾವದಲ್ಲಿಯೆ, ಅವರವರ ಶ್ರದ್ಧೆಯಲ್ಲಿಯೆ, ಅವರವರು ಮುಂದುವರಿಯುವಂತೆ ಹೇಳಿ, ದೀಕ್ಷೆ ಕೊಡುವ ಕೆಲಸದಲ್ಲಿದ್ದೇನೆ. ಸ್ವಲ್ಪ ಹೆಚ್ಚು ಕಡಿಮೆ, ಅದೇ ದಿನದಲ್ಲಿ, ಅದೇ ಸಮಯದಲ್ಲಿ, ನನ್ನ ಮಾತೃಭೂಮಿಯ ಒಂದು ಪರ್ವತಾರಣ್ಯ ಪ್ರದೇಶದ ಮೂಲೆಯಲ್ಲಿ, ಕ್ರೈಸ್ತಮತ ಪ್ರಚಾರಕರು ಬ್ರಿಟಿಷ್ ಸರ್ಕಾರದ ರಾಜಕೀಯ ಬಲ ಮತ್ತು ಪ್ರತಿಷ್ಠೆ ಮತ್ತು ಸೌಕರ್ಯ ಸೌಲಭ್ಯಗಳನ್ನು ಪಡೆದು, ವಿದ್ಯಾಭ್ಯಾಸದ ಮತ್ತು ವೈದ್ಯಕೀಯದ ನೆರವೀಯುವ ಬಲೆಯೊಡ್ಡಿ, ಅರಿಯದ ಅಜ್ಞಾನಿಗಳನ್ನು ತಮ್ಮ ಜಾತಿಗೆ ಸೇರಿಸಿಕೊಂಡು, ತಮ್ಮ ಸಂಖ್ಯಾ ಪ್ರಮಾಣವನ್ನು ಹೆಚ್ಚಿಸಿಕೊಳ್ಳುವ ವ್ಯಾಪಾರೀ ಉದ್ಯಮದಲ್ಲಿದ್ದಾರೆ. ಆದರೆ ಆ ಅಜ್ಞಾನೀ ಜನರಲ್ಲಿಯೂ

ಒಂದು ಅಂಧವಾದ ಸ್ವಮತ ನಿಷ್ಠೆ ಇರುವುದರಿಂದ ಅವರೂ ಮಿಶನರಿಗಳ ಮತಾಂತರ ಕಾರ್ಯವನ್ನು ತಮ್ಮದೇ ಆದ ದಸ್ಯು ವಿಧಾನದಿಂದ ವಿಫಲಗೊಳಿಸುತ್ತಿದ್ದಾರೆ"[೨].

ಈ ಉಪದೇಶದಲ್ಲಿ ಒಂದು ದಟ್ಟವಾದ ರಾಷ್ಟ್ರೀಯತೆಯ ಪ್ರಜ್ಞೆಯನ್ನು ಕುವೆಂಪು ಎಲ್ಲ ನೆಲೆಗಳಲ್ಲಿ ಶೋಧಿಸುತ್ತಾರೆ. ಕುವೆಂಪು ಕಾದಂಬರಿಗಳಲ್ಲಿ ಮತಾಂತರವನ್ನು ವಿರೋಧಿಸುವ ಪ್ರಸಂಗಗಳ ಜೊತೆಯಲ್ಲಿಯೇ ಇರುವ ಸ್ವಧರ್ಮದ ಟೀಕೆಗಳು ಮಹತ್ವವಾದವುಗಳು. ಈ ಬಗೆಯ ವಿಮರ್ಶಾತ್ಮಕ ನೋಟದಿಂದಲೇ ಹೊಸ ರಾಷ್ಟ್ರೀಯ ಪ್ರಜ್ಞೆಯನ್ನು ಮೂಡಿಸಲೆತ್ನಿಸುತ್ತಾರೆ. ನವೋದಯ ಕಾದಂಬರಿಗಳಲ್ಲಿ ಮೂಡುವ ರಾಷ್ಟ್ರೀಯತೆ ಈ ಬಗೆಯದು. ಈ ರಾಷ್ಟ್ರೀಯತೆಯನ್ನು ಮತಾಂತರದೊಂದಿಗೆ ಮುಖಾಮುಖಿ ಮಾಡುತ್ತಲೇ ನವೋದಯ ಲೇಖಕರು ಹೊಸ ಪರಂಪರೆಯೊಂದನ್ನು ಸೃಷ್ಟಿಸುತ್ತಾರೆ. ಈ ಹೊಸ ಪರಂಪರೆ "ಸರ್ವರಿಗೂ ಸಮಬಾಳು, ಸರ್ವರಿಗೂ ಸಮಪಾಲು" ತತ್ವಕ್ಕೆ ಸಂಬಂಧಿಸಿದ್ದು, ಈ ಕಾಲಘಟ್ಟ ಕಂಡ ರಾಷ್ಟ್ರೀಯತೆಯಲ್ಲಿ ಸ್ಥಳೀಯ ಜ್ಞಾನ ಪರಂಪರೆಗಳು ಹೊಸ ವೇಷದೊಂದಿಗೆ ಮೂಡುವುದನ್ನು ಕಾಣಬಹುದಾಗಿದೆ. ನವೋದಯ ಲೇಖಕರು ಒಟ್ಟಿಗೆ ಸ್ವಧರ್ಮ ಹಾಗೂ ಪರಧರ್ಮಗಳ ವಿಮರ್ಶೆಯಲ್ಲಿ ತೊಡಗುವುದರಿಂದ ಎಲ್ಲಿಯೂ ಮತಾಂಧತೆಗೆ ಅವಕಾಶವಿಲ್ಲದ ರಾಷ್ಟ್ರೀಯ ಪ್ರಜ್ಞೆಯನ್ನು ರೂಪಿಸಲು ಸಾಧ್ಯವಾಗಿದೆ. ಇಂತಹ ಪ್ರಜ್ಞೆಯಲ್ಲಿಯೇ ಮತಾಂತರ ಪ್ರಕ್ರಿಯೆಯನ್ನು ಪರಿಶೀಲಿಸುತ್ತಾರೆ.

**೨. ಧರ್ಮನಿರಪೇಕ್ಷಿತ ನೆಲೆ :**

ನವೋದಯ ಕಾದಂಬರಿಗಳಲ್ಲಿ ಮತಾಂತರಕ್ಕೆ ಸಂಬಂಧಿಸಿದಂತೆ ನಡೆಯುವ ಮುಖಾಮುಖಿಯನ್ನು, ಅರ್ಥ ಮಾಡಿಕೊಳ್ಳಲು ಕಾದಂಬರಿಗಳಲ್ಲಿ ವ್ಯಕ್ತವಾಗುವ ಧರ್ಮನಿರಪೇಕ್ಷತೆಯನ್ನು ಅಧ್ಯಯನ ಮಾಡುವುದು ಸೂಕ್ತವೆನಿಸುತ್ತದೆ. ನವೋದಯ ಕಾದಂಬರಿಗಳಲ್ಲಿನ ಧರ್ಮ ನಿರಪೇಕ್ಷತೆಯನ್ನು ಶೋಧಿಸುವ ಮೊದಲು ಧರ್ಮ ನಿರಪೇಕ್ಷತೆ ಎಂದರೇನು ? ಮತ್ತದರ ಸ್ವರೂಪಗಳನ್ನು ಚರ್ಚಿಸುವುದು ಸೂಕ್ತವೆನಿಸುತ್ತದೆ. ಧರ್ಮ ನಿರಪೇಕ್ಷತೆಗೆ ಸಂಬಂಧಿಸಿದಂತೆ ಖ್ಯಾತ ಇತಿಹಾಸಕಾರ್ತಿ 'ಪ್ರೊ.ರೊಮಿಲಾ ಥಾಪರ್',

" ಈ ಪರಿಕಲ್ಪನೆಯನ್ನು ಅರ್ಥ ಮಾಡಿಕೊಳ್ಳಲು ಯೂರೋಪಿನಲ್ಲಿಯ ರೋಮನ್ನರ ಕಾಲದಿಂದ ಕ್ರಿಸ್ತಶಕದವರೆಗಿನ ಧರ್ಮ ನಿರಪೇಕ್ಷತ್ವದ ಇತಿಹಾಸಕ್ಕೆ ನಾವು ಹೋಗಬೇಕಾಗಿಲ್ಲ. ಮಧ್ಯಕಾಲೀನ ಯುಗದ ಕೊನೆಯ ಘಟ್ಟದಿಂದಲೂ ಯೂರೋಪಿನಲ್ಲಿ ಚರ್ಚ್ ಮತ್ತು ಪ್ರಭುತ್ವಗಳ ನಡುವೆ ಘರ್ಷಣೆಯಿತ್ತು. ಕ್ಯಾಥೋಲಿಸಿಸಂ ಮತ್ತು ಪ್ರೊಟೆಸ್ಟಂಟಿಸಮ್‌ಗಳ ನಡುವಿನ ಘರ್ಷಣೆಯ ಮೂಲಕ ಯೂರೋಪಿನ ಮೇಲ್ವರ್ಗಗಳನ್ನು ಪ್ರಶ್ನಿಸುವುದರಿಂದ ಉದ್ಭವಿಸುವ ಒಂದು ನಿರ್ದಿಷ್ಟ ಅರ್ಥದಲ್ಲಿ ಧರ್ಮ ನಿರಪೇಕ್ಷತ್ವವನ್ನು ಒಂದು ಪರಿಕಲ್ಪನೆಯಾಗಿ ಬೇರೆಯಾದ ಮತ್ತು ಹೆಚ್ಚು ವೈಶಾಲ್ಯವುಳ್ಳ ಅರ್ಥವನ್ನು ಪಡೆದಿದೆ. ಈ ಪರಿಕಲ್ಪನೆಯನ್ನು ಕೇವಲ ಚರ್ಚ್ ಮತ್ತು ಪ್ರಭುತ್ವದ ನಡುವಿನ ಘರ್ಷಣೆಯಾಗಿ ಈಗಲೂ ಸಮೀಕರಿಸುವುದರಿಂದ ಈ ವ್ಯತ್ಯಾಸವು ಅನೇಕ ಸಲ ಕಡೆಗಣಿಸಲ್ಪಡುತ್ತದೆ. ಧಾರ್ಮಿಕ ಬಹುತ್ವದ ಇರುವಿಕೆ ಮತ್ತು ಅವುಗಳ ಸಮಾನ ಸ್ಥಾನವನ್ನು ಈ ಹೊಸ ಅರ್ಥವು ನಂಬುತ್ತದೆ. ಅಲ್ಲದೆ ಧಾರ್ಮಿಕ ನೆಲೆಯಿಂದ ಗುರುತಿಸುವುದಕ್ಕಿಂತ ನಾಗರಿಕನಾಗಿ ವ್ಯಕ್ತಿಯ ಹಕ್ಕುಗಳು ಹೆಚ್ಚು ಆಧ್ಯತೆಯನ್ನು ಪಡೆಯುವಂತಹ ಸಮಾಜವು ಕ್ರಮೇಣ ಮೇಲೇಳುತ್ತದೆಂದು ಕೂಡ ಈ ಹೊಸ ಅರ್ಥವು ಭಾವಿಸುತ್ತದೆ.

ಹತ್ತೊಂಭತ್ತನೇ ಶತಮಾನದ ಈ ಲಕ್ಷಣವು ಒಂದು ಧರ್ಮ ನಿರಪೇಕ್ಷ ಸಮಾಜವನ್ನು ಸಹ–ಮಾನವರ ಒಳಿತಿಗಾಗಿ ಪ್ರಕೃತವಾದ ಮತ್ತು ನಿರಂತರವಾದ ಕಾಳಜಿಯನ್ನು ಆಧರಿಸಿದ ಸಾಮಾಜಿಕ ನೈತಿಕತೆಯುಳ್ಳದ್ದಾಗಿ ಕಾಣುತ್ತದೆ. ಸಾಮಾಜಿಕ ನೈತಿಕತೆಯು ದೇವರ ಮೇಲಿನ ಅಥವಾ ಭವಿಷ್ಯ ಜೀವನದ ಬಗೆಗಿನ ನಂಬಿಕೆಯಿಂದ ಉದ್ಭೃತವಾಗಬೇಕಿಲ್ಲ. ಅದು ಅಂತಹ ನಂಬಿಕೆಗಳಿಗೆ ವಿರುದ್ಧವಾಗಿಲ್ಲದಿದ್ದರೂ ಅವುಗಳನ್ನು ಸಾಮಾಜಿಕ, ನೈತಿಕತೆಯ ಕಾಳಜಿಗಳಿಗೆ ಅಗತ್ಯವಾದ ಪೂರ್ವ ನಿಬಂಧನೆಗಳಾಗಿ ಭಾವಿಸುವುದಿಲ್ಲ. ಆದ್ದರಿಂದ ಧರ್ಮ ನಿರಪೇಕ್ಷೀಕರಣವು ಐತಿಹಾಸಿಕ ಬದಲಾವಣೆಯ ಪ್ರಕ್ರಿಯೆಗೆ ಸಂಬಂಧಪಟ್ಟದ್ದು ಮತ್ತು ಈ ಪ್ರಕ್ರಿಯೆಯು ಸಮಾಜದ ಆಧುನೀಕರಣದೊಂದಿಗೆ ಗಾಢವಾಗಿ ಕೂಡಿಕೊಂಡಿದೆ. ನಾನು ಒತ್ತಿಹೇಳಲು ಬಯಸುವುದೇನೆಂದರೆ, ಅದು ಐತಿಹಾಸಿಕವಾಗಿನಿರ್ದಿಷ್ಟವಾಗಿದೆ ಮತ್ತು ಒಂದು ನಿರ್ದಿಷ್ಟ ಐತಿಹಾಸಿಕ ಸನ್ನಿವೇಶಕ್ಕೆ ಸಂಬಂಧಿಸಿದೆ. ಈ ಐತಿಹಾಸಿಕ ಸನ್ನಿವೇಶವು ಆಧುನೀಕರಣದ ಪ್ರಕ್ರಿಯೆಯೊಂದಿಗೆ ಮಿಲಿತವಾಗಿದೆ..... ಒಂದು ಸಮಾಜದ ಆಧುನೀಕರಣವು ರಾಷ್ಟ್ರ ಪ್ರಭುತ್ವ, ಪ್ರಜಾಪ್ರಭುತ್ವ ಕೈಗಾರೀಕರಣ, ಖಾಸಗೀ ಅಥವಾ

ಸಾರ್ವಜನಿಕ ಬಂಡವಾಳ ಹೂಡಿಕೆ ಅಥವಾ ಈ ಬದಲಾವಣೆಯಲ್ಲಿ ಭಾಗವಹಿಸುವ ಮಧ್ಯಮ ವರ್ಗದ ಉಗಮ–ಇವುಗಳ ಅಸ್ತಿತ್ವವನ್ನು ನಂಬುತ್ತದೆ"[೮] ಎಂದು ವಿವರಿಸುತ್ತಾರೆ.

ಧರ್ಮ ನಿರಪೇಕ್ಷತ್ವವು ಹತ್ತೊಂಭತ್ತು ಮತ್ತು ಇಪ್ಪತ್ತನೇ ಶತಮಾನಗಳಲ್ಲಿ ಪಡೆದುಕೊಳ್ಳುವ ಧಾರ್ಮಿಕ ಬಹುತ್ವದ ಇರುವಿಕೆ, ಅವುಗಳ ಸ್ಥಾನಮಾನ ಹಾಗೂ ವ್ಯಕ್ತಿಯನ್ನು ಧಾರ್ಮಿಕ ನೆಲೆಯಿಂದ ಗುರ್ತಿಸುವುದಕ್ಕಿಂತ ನಾಗರೀಕ ನೆಲೆಯಿಂದ ಗುರ್ತಿಸುವ ಲಕ್ಷಣಗಳು ಅದೇ ಕಾಲದಲ್ಲಿ ರೂಪುಗೊಂಡ ನವೋದಯ ಕಾದಂಬರಿಗಳಲ್ಲಿ ಹೇಗೆ ವ್ಯಕ್ತವಾಗುತ್ತದೆ ಎಂದು ಚರ್ಚಿಸಬಹುದಾಗಿದೆ.

ನವೋದಯದ ಮೊದಲ ಘಟ್ಟದ ವಾಸ್ತವವಾದಿ ಕಾದಂಬರಿಗಳು ಪರಂಪರೆಯನ್ನು ಸಂದೇಹಿಸಿ ನೋಡುವ ದೃಷ್ಟಿಕೋನವನ್ನು ವ್ಯಕ್ತಪಡಿಸಿದವು. ಅವು ಒಂದು ಆದರ್ಶೀಕೃತ ರಾಷ್ಟ್ರ ಕಲ್ಪನೆಯನ್ನು ಮಂಡಿಸುತ್ತಲೇ ತಳೆದ ಜಾತ್ಯಾತೀಯ ನಿಲುವುಗಳನ್ನು ಮುಖ್ಯವಾಗಿ ಸಾಂಪ್ರದಾಯಿಕವಾಗಿ ಸಮಾಜದ ನಿಲುವುಗಳನ್ನು ಸಂದೇಹಿಸುವ ತಾತ್ವಿಕ ಪ್ರೇರಣೆಯೊಂದು ಇವುಗಳಲ್ಲಿ ವ್ಯಕ್ತವಾಯಿತು. 'ಇಂದಿರಬಾಯಿ', 'ಮಾಡಿದ್ದುಣ್ಣೊ ಮಾರಾಯ', 'ಮುಸುಕು ತೆಗೆಯೆ ಮಾಯಾಂಗನೆ' ಕಾದಂಬರಿಗಳೂ ತೋರುವ ಸಾಂಪ್ರದಾಯಿಕ ಜಡತ್ವ ವ್ಯವಸ್ಥೆಯ ವಿಡಂಬನೆ ಹಾಗೂ ಇಂಥ ಯಥಾಸ್ಥಿತಿವಾದ ಸಮಾಜಕ್ಕೆ ತರಬಯಸುವ ಚಿಕಿತ್ಸಿಕ ಮನೋಭಾವಗಳು ಧರ್ಮ ನಿರಪೇಕ್ಷಿತ ತತ್ವದ ಪ್ರತಿಪಾದನೆಗಳಾಗಿವೆ. ಅಲ್ಲದೆ ಸಾಹಿತ್ಯದಲ್ಲಿ ಅಲ್ಲಿಯವರೆಗೂ ಇದು ಧಾರ್ಮಿಕ ಚೌಕಟ್ಟಿಂದ ಮಾಯವಾಗಿ ನಾಗರೀಕ ಪಾತ್ರಗಳ ಅನಾವರಣದಲ್ಲಿ ಆಧುನಿಕ ಕನ್ನಡ ಸಾಹಿತ್ಯ ತೊಡಗಿದುದೇ ಧರ್ಮ ನಿರಪೇಕ್ಷತತ್ವವನ್ನು ಆವರಿಸಿಕೊಂಡ ಹೊಸ ಕ್ರಮವಾಗಿದೆ. ಅದು ನಾಗರಿಕ ಸಮಾಜವನ್ನು ಅಭಿವ್ಯಕ್ತಿಸುವಲ್ಲಿ ಸಾಹಿತ್ಯಿಕ ಪ್ರೇರಣೆ ಹಾಗೂ ಪ್ರಭಾವಗಳಿಗೆ ಗುರಿಯಾಗಿ ರೂಪಿಸಿಕೊಂಡ ಹೊಸ ಸಾಹಿತ್ಯ ತತ್ವ ಹಾಗೂ ಸಾಹಿತ್ಯ ಪ್ರಕಾರಗಳು ಧರ್ಮನಿರಪೇಕ್ಷಿತ ತತ್ವವನ್ನು ಒತ್ತಾಯಿಸುವಂಥವಾಗಿದ್ದವು.

ನವೋದಯ ಕಾದಂಬರಿಗಳನ್ನು ವಸಾಹತುಶಾಹಿಯಿಂದುಂಟಾದ ಮತಾಂತರ ಪ್ರಕ್ರಿಯೆಗೆ ಪ್ರತಿಕ್ರಿಯಿಸುವಾಗ ತೋರುವ ಮುಖ್ಯವಾದ ನೋಟ ಕ್ರಮ ಧರ್ಮ

ನಿರಪೇಕ್ಷತೆಯಾಗಿದೆ. ಅವು ಎಲ್ಲಿಯೂ ಸ್ವಧರ್ಮವನ್ನು ಎತ್ತಿಹಿಡಿದು ಪರಧರ್ಮದ ನಿಂದನೆಗೆ ಮಾತ್ರ ಸೀಮಿತವಾಗುವುದಿಲ್ಲ. ಬದಲಾಗಿ ಸ್ವಧರ್ಮ ಹಾಗೂ ಪರಧರ್ಮಗಳೆರಡರೊಳಗೂ ಇರುವ ಧಮನಕಾರಿ ವ್ಯವಸ್ಥೆಗಳನ್ನು ವಿಮರ್ಶೆಗೊಳಪಡಿಸುತ್ತವೆ. ಈ ಮೂಲಕ ಹೊಸದೊಂದು ಸಾಮಾಜಿಕ ಸಂರಚನೆಗೆ ನಾಂದಿಯಾಡುತ್ತವೆ. ಅಂದರೆ ಎರಡೂ ಧರ್ಮಗಳಲ್ಲಿನ ಉತ್ತಮಾಂಶಗಳನ್ನು ಆವಾಹಿಸಿಕೊಂಡು ಸಮಾಜದಲ್ಲಿ ನಡೆಯಬಹುದಾದ ದಿಕ್ಕುಗಳನ್ನು ರೂಪಿಸುತ್ತದೆ. ಇದಕ್ಕೆ ಕುವೆಂಪುರವರ 'ಕಾನೂರು ಹೆಗ್ಗಡತಿ' ಹಾಗೂ 'ಮಲೆಗಳಲ್ಲಿ ಮದುಮಗಳು' ಮತ್ತು ಕಾರಂತರ 'ಚೋಮನದುಡಿ' ಕಾದಂಬರಿಗಳನ್ನು ಉತ್ತಮ ನಿದರ್ಶನಗಳಾಗಿ ನೋಡಬಹುದಾಗಿದೆ.

ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ಮತಾಂತರಕ್ಕೆ ಸಂಬಂಧಿಸಿದ ವಿವರಗಳನ್ನು ಬಳಸುವಾಗೆಲ್ಲಾ ಕ್ರೈಸ್ತಧರ್ಮವನ್ನು ಮಾತ್ರ ನಿಂದಿಸದೆ, ಹಿಂದೂ ಧರ್ಮದೊಳಗಿನ ಜಾತಿ ಪದ್ಧತಿ, ಮೂಢನಂಬಿಕೆ, ಅನಾಚಾರಗಳನ್ನೂ ವಿಡಂಬಿಸುತ್ತಾರೆ. ಹಾಗೆಯೇ ಆಧುನಿಕತೆ, ಮತಾಂತರ ಪ್ರಕ್ರಿಯೆಗಳ ಜೊತೆಗೆ ಕೇವಲ ಸಂಘರ್ಷಗಳ ಜೊತೆಗೆ ಸಂವಾದವನ್ನು ಮಾಡುತ್ತಾರೆ. ಮಲೆನಾಡಿನ ಪರಿಸರದಲ್ಲಿ ಮತಾಂತರದ ಮೂಲಕ ವಸಾಹತುಶಾಹಿ ಸಾಂಸ್ಕೃತಿಕ ಹೇರಿಕೆಯನ್ನು ತೀವ್ರವಾಗಿ ವಿರೋಧಿಸುವ ಹಾಗೂ ಅದರ ಜೊತೆಗೆ ಸಂಘರ್ಷಕ್ಕಿಳಿದು ಹಿಂದೂ ಪರಂಪರೆಯನ್ನು ಎತ್ತಿ ಹಿಡಿಯುವ ಕುವೆಂಪು ಆಧುನಿಕತೆಯಿಂದ ಶಿಕ್ಷಣ ಪದ್ಧತಿ ಇಲ್ಲಿನ ಅಸಮಾನತೆಗಳನ್ನು ಹೋಗಲಾಡಿಸಿ ಹೊಸ ವ್ಯವಸ್ಥೆಗೆ ಕಾರಣಾಗುತ್ತದೆ ಎಂದು ನಂಬಿದ್ದವರಾಗಿದ್ದರು. ಮುಕುಂದಯ್ಯ ತನ್ನ ಭಾವನಾದ ದೇವಯ್ಯನ ಮತಾಂತರ ಪ್ರಕ್ರಿಯೆಯನ್ನು ವಿರೋಧಿಸಿ ಮತಾಂತರ ಸಮಾರಂಭದ ಸಂದರ್ಭದಲ್ಲಿ ಕೋವಿಯಿಂದ ಗುಂಡು ಹಾರಿಸಿದ ನಂತರ ಅವನನ್ನು ರೆವರೆಂಡ್ ಲೇಕ್ ಹಿಲ್‌ರು ಭೇಟಿಯಾಗುತ್ತಾರೆ. ಆ ಸಂದರ್ಭದ ವಿವರಣೆ ಹೀಗಿದೆ,

"ಒಂದೆರಡು ನಿಮಿಷಗಳ ಕಾಲ ಮುಕುಂದಯ್ಯನನ್ನೇ ಗಮನಿಸುತ್ತಿದ್ದು ತಾವು ಏನು ಮಾತಾಡಬೇಕು ಎಂಬುದನ್ನು ಆಲೋಚಿಸುತ್ತಿದ್ದಂತೆ ತೋರಿದರು ಲೇಕ್‌ಹಿಲ್. ಆದರೆ ಅವರು ಏನನ್ನು ಆಲೋಚಿಸುತ್ತಿರಲಿಲ್ಲ. ಮುಕುಂದಯ್ಯನ ವ್ಯಕ್ತಿತ್ವದ ಸ್ವರೂಪವನ್ನು ಗ್ರಹಿಸುವ ಕಾರ್ಯದಲ್ಲಿ ತೊಡಗಿದ್ದರು: ಮುಕುಂದಯ್ಯ ದೇವಯ್ಯನಂತೆ

ಕ್ರಾಪು ಬಿಟ್ಟಿರಲಿಲ್ಲ: ಟೋಪಿಯ ಹಿಂದೆ ಕಟ್ಟಿದ್ದ ಜುಟ್ಟು ಕಾಣಿಸುತ್ತಿತ್ತು. ಹಣೆಯ ಮೇಲೆ ನಾಮವೂ ಇತ್ತು. ಕಿವಿಯಲ್ಲಿ ಒಂಟಿಗಳೂ ಇದ್ದವು. ಆದರೆ ಅವನ ಮುಖದಲ್ಲಿ ಅಲ್ಲಿದ್ದವರಾರಲ್ಲಿಯೂ ಇಲ್ಲದಿದ್ದ ಒಂದು ಸತ್ವಪೂರ್ಣ ತೇಜಸ್ಸನ್ನು ಸರಳಸುಂದರ ಪ್ರಸನ್ನತೆಯನ್ನು ದರ್ಶಿಸಿದ ಲೇಕ್‌ಹಿಲ್ ರಿಗೆ ಅವನ ವಿಷಯದಲ್ಲಿ ಒಂದು ಗೌರವಪೂರ್ವಕವಾದ ವಿಶ್ವಾಸಹುಟ್ಟಿ, ಅವರ ಮುಖದ ಮೇಲೆಯೂ ಸುಪ್ರಸನ್ನತೆ ಸುಳಿದಾಡಿದುದನ್ನು ಕಂಡು ಜೀವನ ರತ್ನಯ್ಯಗೆ ಬೆರಗಾಯಿತು. ತಾನು ಮುಕುಂದಯ್ಯನ ಮೇಲೆ ಹೇಳಿದ್ದುದೆಲ್ಲ ವ್ಯರ್ಥವಾಯಿತೋ ಏನೋ ಎಂದು ಕರಿಪಾದ್ರಿಗೆ ಮುಖಭಂಗವೂ ಆಯಿತು.

ಆದರೆ ಒಂದು ವಿಷಯ ಮಾತ್ರ ಆ ಘಟನೆಯ ರೂಪಣೆಯಲ್ಲಿ ಭಾಗಿಗಳಾಗಿದ್ದವರೆಲ್ಲಾ ಪ್ರಜ್ಞಾಭೂಮಿಕೆಗೂ ಅತೀತವಾಗಿದ್ದು, ಅಗೋಚರವಾಗಿತ್ತು : ರೆವರೆಂಡ್ ಲೇಕ್‌ಹಿಲ್ ಆಗಲಿ, ಉಪದೇಶಿ ಜೀವರತ್ನಯ್ಯನಾಗಲಿ, ಮುಕುಂದಯ್ಯನಾಗಲೀ, ಯಾವ ಇತ್ಯರ್ಥಗಳನ್ನು ತಾವೇ ಸ್ವತಂತ್ರವಾಗಿ ನಿರ್ಣಯಿಸುತ್ತಿದ್ದೇವೆ ಎಂದು ಭಾವಿಸಿ ವರ್ತಿಸುತ್ತಿದ್ದರೋ ಆ ಇತ್ಯರ್ಥಗಳಿಗೆಲ್ಲ ಅಂತರ್ಯಾಮಿ ಸೂತ್ರಧಾರಿಯಾಗಿತ್ತು. ಭಗವಂತನ ಅಡಿದಾವರೆವರೆಗೂ ನಿಡಚಾಚಿ ಅದನ್ನು ತನ್ನ ಹೂವೆರೆಗೆ ಬಿಗಿದಪ್ಪಿ ಒಬ್ಬಳು ಪ್ರಣಯಾರ್ಥಿ ತರುಣಿಯ ಪ್ರೇಮಮಯ ಮುಗ್ಧ ಆರ್ತ ಅಭೀಪ್ಸೆಯ ಪ್ರಾರ್ಥನಾಬಾಹು"![6] ಎಂದು ವಿವರಿಸುತ್ತಾರೆ ಹಾಗೆಯೇ ಮುಂದುವರೆದು ರೆವರೆಂಡ್ ಲೇಕ್ ಹಿಲ್ ರ ಮಾಡುವ ಉಪದೇಶಿ ಚಿತ್ರಿಸುತ್ತಾ ಮಲೆನಾಡಿನ ಜನಕ್ಕೆ ಅವರಲ್ಲಿ ಗೌರವಭಾವ ಮೂಡುವಂತೆ ಮಾಡುತ್ತಾರೆ. ಇದು ಕುವೆಂಪು ಮತಾಂತರವನ್ನು ವಿರೋಧಿಸುತ್ತಲೇ ಕ್ರೈಸ್ತಧರ್ಮದ ಬಗೆಗೆ ತಾಳುವ ಗೌರವ ಪೂರ್ಣಭಾವನೆಯ ಸಂಕೇತವಾಗಿದೆ.

ಕಾರಂತರ 'ಚೋಮನದುಡಿ' ಇದನ್ನು ಇನ್ನೊಂದು ನೆಲೆಯಿಂದ ಕಾಣಲು ಪ್ರಯತ್ನಿಸುತ್ತದೆ. ಇಡೀ ಕಾದಂಬರಿಯು ಜಾತಿ ಪದ್ಧತಿಯಿಂದ ಶೋಷಿತಗೊಂಡ ಚೋಮನನ್ನು ಗೇಣಿದಾರನನ್ನಾಗಿ ಮಾಡಲು ಅಡ್ಡಿಯಿರುವ ಹಿಂದೂ ಧರ್ಮದ ವಿಮರ್ಶೆ ಮಾಡಿದರೆ, ಕ್ರಿಶ್ಚಿಯನ್ ಮತಾಂತರ ತೋರುವ ಆಮಿಷ–ಸವಲತ್ತುಗಳ ಮೂಲಕ ನಡೆಯುವ ಮತಾಂತರಗಳನ್ನು ಸೂಕ್ಷ್ಮವಾಗಿ ವಿಮರ್ಶೆಗೆ ಒಳಪಡಿಸುತ್ತಾರೆ. ಎರಡರೊಳಗೂ ಇರುವ ಮೌಢ್ಯಗಳನ್ನು ತಿರಸ್ಕರಿಸುತ್ತಾರೆ. ಹೀಗೆ ಮಾಡುವಾಗ

ಎಲ್ಲಿಯೂ ಎರಡರ ನಡುವಿನ ಸಂಘರ್ಷಗಳನ್ನು ಏಕಮುಖಿಗೊಳಿಸುವುದಿಲ್ಲ. ಜಾತಿಗೆಟ್ಟು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಂಡಿರುವ ತನ್ನ ಮಗ ಗುರುವನನ್ನು ಬಹಿಷ್ಕರಿಸುವ ಚೋಮ ಅವನಿಗೆ ಅದರಿಂದ ಸಿಕ್ಕಿದ ಸಾಗುವಳಿ ಮಾಡುವ ಯೋಗ ದೊರಕ್ಕಿದ್ದಕ್ಕೆ ಸಂತೋಷಗೊಳ್ಳುತ್ತಾನೆ. ಕೊನೆಗೆ ತಾನೂ ಗುರುವನಂತೆಯೇ ಮತಾಂತರಗೊಂಡು ಸಾಗುವಳಿದಾರನಾಗುವ ಕನಸು ಕಾಣುತ್ತಾನೆ.

"ತಾನು ಹೊಲೆಯನಾಗಿರುವಷ್ಟೂ ದಿನ ಬೇಸಾಯಗಾರನಾಗಲಾರೆ ಎಂಬುದು ಖಂಡಿತ. ಅದೇ ಸಮಯಕ್ಕೆ ಗುರುವನ ಯೋಚನೆಯೂ ಬಂದಿತು. ಅವನ ಮೇಲೆ ತಿರುಚಿ ಹೊಸ ಕೋಪ ಜ್ವಲಿಸುವ ಬದಲು ಅಸೂಯೆ ಕೆರಳುವ ಬದಲು 'ಅವನಂತೆ ತಾನೂ ಆಗಬಾರದೆ' ಎಂಬ ಮನಸ್ಸಾಯಿತು. ಕುಲದ ದೇವರನ್ನು ನಂಬಿ, ತನ್ನ ಆಸೆ ಕೈಗೂಡದ ಮೇಲೆ, ಪಾದ್ರಿಯ ದೇವರನ್ನು ನಂಬಿದರೇನು ಹಾನಿ?"[೧೦] ಎಂದು ತೀರ್ಮಾನಿಸಿ ಮತಾಂತರವಾಗಲು ಹೊರಡುತ್ತಾನೆ. ಅನಂತರ ಅವನು ನಿಷ್ಠೆಯಿಂದ ಕಾಣುತ್ತಿದ್ದ ಪಂಜುರ್ಲಿ ಭೂತ ಅವನನ್ನು ತಡೆಯುತ್ತದೆ. ಅಲ್ಲಿಂದ ತಿರುಗಿ ಬಂದ ಚೋಮ ತನ್ನ ಮನೆಯಲ್ಲಿ ಮಗಳು ಬೆಳ್ಳಿ ಹಾಗೂ ಮನ್ವೇಲನು ಒಂದೇ ಚಾಪೆಯ ಮೇಲೆ ಕುಳಿತಿರುವುದನ್ನು ಕಂಡು ಕ್ರುದ್ಧನಾಗಿ ಎಲ್ಲರನ್ನೂ ಮನೆಯಿಂದ ಹೊರಹಾಕುತ್ತಾನೆ. ಅನಂತರ ತನ್ನ ದುಡಿಯನ್ನು ಭಾರಿಸುತ್ತಲೇ ಸಾಯುತ್ತಾನೆ. ಕಾರಂತರು ಈ ದ್ವಂದ್ವಗಳನ್ನು ಶೋಧಿಸುವುದು ಧರ್ಮ ನಿರಪೇಕ್ಷತ್ವದಿಂದಲೇ ಆಗಿದೆ. ಚೋಮ ಪಂಜುರ್ಲಿ ಭೂತಕ್ಕೆ ಹೆದರಿ ಕ್ರೈಸ್ತ ಮತಕ್ಕೆ ಸೇರುವ ತನ್ನ ನಿಲುವನ್ನು ಬದಲಿಸಿಕೊಂಡು ಬರುವ ಚೋಮನಿಗೆ ತನ್ನ ಧರ್ಮದ ಬಗೆಗಿರುವ ಪ್ರತಿರೋಧವನ್ನು ದುಡಿಯನ್ನು ಬಾರಿಸುವುದರ ಮೂಲಕ ವ್ಯಕ್ತಪಡಿಸುತ್ತಾನೆ.

ನವೋದಯ ಕಾದಂಬರಿಗಳು ಧಾರ್ಮಿಕವಾದ ವಿಷಯಗಳನ್ನು ಚರ್ಚಿಸುವಾಗ ತೋರುವ ಧರ್ಮನಿರಪೇಕ್ಷತೆ ಗಾಂಧೀಜಿಯಿಂದ ರೂಪುಗೊಂಡ ಸರ್ವಧರ್ಮ ಸಮನ್ವಯ ತತ್ವವನ್ನು ಆಧರಿಸುವಂಥದ್ದು. ಇದರ ಇನ್ನೊಂದು ನೆಲೆಯಾದ ವ್ಯಕ್ತಿಯನ್ನು ನಾಗರಿಕ ಪ್ರಜ್ಞೆಯ ಮೂಲಕ ನೋಡುವುದಕ್ಕೂ ಕುವೆಂಪುರವರ 'ಕಾನೂರು ಹೆಗ್ಗಡತಿ' ಯ ಹೂವಯ್ಯ ಹಾಗೂ 'ಮಲೆಗಳಲ್ಲಿ ಮದುಮಗಳು' ದಲ್ಲಿನ ಮುಕುಂದಯ್ಯ ಉತ್ತಮ ಉದಾಹರಣೆಗಳಾಗುತ್ತಾರೆ. ಅಲ್ಲದೆ ಕುವೆಂಪು ತಮ್ಮ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಓದುಗರಿಗೆ ಬರೆದ

ಭಾಗದಲ್ಲಿ "ಇಲ್ಲಿ ಯಾರೂ ಮುಖ್ಯರಲ್ಲ, ಯಾರೂ ಅಮುಖ್ಯರಲ್ಲ', ಯಾವುದು ಯಕಃಶ್ಚಿತವಲ್ಲ!" ಎಂದು ಹೇಳುವುದು ಎಲ್ಲರನ್ನು ನಾಗರೀಕ ಪ್ರಜ್ಞೆಯೊಳಗೆ ನಿಕಶಕ್ಕೊಡುವ ಮನೋಧರ್ಮವನ್ನು ಕಾಣಬಹುದಾಗಿದೆ.

ಇವು ನವೋದಯ ಕಾಲಘಟ್ಟವು ಮತಾಂತರ ಪ್ರಕ್ರಿಯೆಗೆ ಪ್ರತಿಕ್ರಿಯಿಸುವಾಗ ಆವಾಹಿಸಿಕೊಳ್ಳುವ ಧರ್ಮನಿರಪೇಕ್ಷ ತತ್ವದ ಮುಖ್ಯ ಉದಾಹರಣೆಗಳಾಗಿವೆ.

**ವರ್ಗ ಸಂಘರ್ಷದ ನೆಲೆ :**

ನವೋದಯ ಕಾದಂಬರಿಗಳಲ್ಲಿ ಮತಾಂತರ ಪ್ರಕ್ರಿಯೆಯನ್ನು ವರ್ಗ ಸಂಘರ್ಷದ ನೆಲೆಯ ಮೂಲಕವೂ ಅರಿಯಬಹುದಾಗಿದೆ. ಅಂಬೇಡ್ಕರ್ ಭಾರತದಲ್ಲಿನ ಜಾತಿಗಳೇ ವರ್ಗಗಳು ಎನ್ನುತ್ತಾರೆ. ಈ ಹಿನ್ನೆಲೆಯಲ್ಲಿ ಕಾರಂತರ 'ಚೋಮನದುಡಿ' ಇದಕ್ಕೆ ಉತ್ತಮ ಉದಾಹರಣೆಯಾಗಿ ನಿಲ್ಲುವ ಕಾದಂಬರಿ. ಕಾದಂಬರಿಯಲ್ಲಿ ಮುಖ್ಯ ಪ್ರಶ್ನೆಯೇ ಭೂಮಿಗೆ ಸಂಬಂಧಿಸಿದ್ದಾಗಿದೆ ಚೋಮ ತನ್ನ ಕಾದಂಬರಿಯುದ್ದಕ್ಕೂ ಗೇಣಿದಾರನಾಗುವ ಆಕಾಂಕ್ಷೆಯನ್ನು ತೋರುತ್ತಾರೆ. ಈ ಸಮಸ್ಯೆಯನ್ನು ಕಾರಂತರು ಸ್ವಮತ ಹಾಗೂ ಪರಮತಗಳಲ್ಲಿ ಅವಕಾಶಗಳನ್ನು ನಿಕಶಕ್ಕೊಡುವ ಮೂಲಕ ಚರ್ಚಿಸುತ್ತಾರೆ. ಚೋಮ ಸಂಕಪ್ಪಯ್ಯನ ಬಳಿ ಗೇಣಿಗೆ ಕೇಳುವ ಸಂದರ್ಭ ತುಂಬಾ ಮುಖ್ಯವಾದುದು. "ಇನ್ನೇನಿಲ್ಲ, ಧನಿಗಳಿಗೆ ಇಷ್ಟೆಲ್ಲ ಒಕ್ಕಲು ಮಕ್ಕಳಿದ್ದಾರೆ, ಈ ಚೋಮನಿಗೂ ಒಂದು ಹಾಳು ಕೊಂಪೆಯನ್ನು ಗೇಣಿಗೆ ಕೊಟ್ಟಿದ್ದರೆ, ನಿಮ್ಮ ಹೆಸರು ಹೇಳಿ ಬದುಕುತ್ತಿದ್ದ".

ಚೋಮನ ಮಾತನ್ನ ಕೇಳಿ ಸಂಕಪಯ್ಯನವರಿಗೆ ಆಶ್ಚರ್ಯವೇ ಆಯಿತು.

ಹೊಲೆಯರು ಬೇಸಾಯಗಾರರಾಗುವುದುಂಟೇ ? ಎನಿಸಿತು. ಆದರೆ, ಅವರಲ್ಲಿ ಬಂಜರು ಬಿದ್ದ ಎಷ್ಟೋ ಜಮೀನುಗಳಿದ್ದವು. ಅದನ್ನೇಕೆ ಅವನು ಸಾಗುವಳಿ ಮಾಡಬಾರದೆಂದು ತೋಚಿದುದರಿಂದ, ಅದೇ ವಿಷಯವನ್ನು ಪ್ರಸ್ತಾಪಿಸಲು ಒಳಕ್ಕೆ ತಮ್ಮ ತಾಯಿಯ ಬಳಿಗೆ ಹೋದರು. ಚೋಮ ಆಸೆಯಿಂದ ಹೊರಕ್ಕೆ ಕಾದು ಕುಳಿತ. ತಾನು ಬೇಸಾಯಗಾರನಾಗುವ ಸುದಿನ ಬಂತೆಂದು ಎದೆಯು ಉಲ್ಲಾಸದಿಂದ ಬಡಿಯಿತು. ಕಾಫಿ ತೋಟದ ಮರವೆಯಾಯಿತು. ಧನಿಗಳು ತಿರುಗಿ ಬಂದು

"ಚೋಮ, ಇದುವರೆಗೆ ನಮ್ಮ ಹಿರಿಯರು ನಿಮ್ಮವರಿಗೆ ಗೇಣಿಗೆ ಗದ್ದೆ ಕೊಟ್ಟಿದ್ದಿಲ್ಲ. ಈಗ ಹಾಗೆ ಕೊಡಲಿಕ್ಕೆ ಬುರವ ಹಾಗೆ ಇಲ್ಲ" ಅಂದರು. ಆ ಮಾತಿಗೆ ಪ್ರತಿ ಮಾತಿಲ್ಲ, ವಿಷಯ ಅಲ್ಲಿಗೆ ಮುಗಿಯಿತು. ಮನೆಯೊಳಗಿಂದ ಸಂಕಪ್ಪಯ್ಯನವರ ತಾಯಿ 'ಅಬ್ಬಾ ! ಈ ಹೊಲೆಯರಿಗೆ ಬಂದ ಸೊಕ್ಕೇ' ಎಂದು ಶಪಿಸುತ್ತಿದ್ದಳು. ಚೋಮ ನಿರಾಶೆಯಿಂದ ಮನೆಗೆ ಮರಳುವ ನಿಶ್ಚಯ ಮಾಡಿದ"[೧೧]. ಇಲ್ಲಿ ಹಿಂದೂ ಸಾಂಪ್ರದಾಯಿಕ ಸಮಾಜದ ವರ್ಗದೃಷ್ಟಿಕೋನವೊಂದು ಪ್ರಕಟಗೊಳ್ಳುವುದನ್ನು ಕಾರಂತರು ಸೂಕ್ಷ್ಮವಾಗಿ ವಿಡಂಬಿಸುತ್ತಾರೆ. ಚೋಮ ಸಾಂಪ್ರದಾಯಿಕ ಹಿಂದೂ ಸಮಾಜದ ಚೌಕಟ್ಟಿನಲ್ಲಿ ಗೇಣಿದಾರನಾಗಲು ಸಾಧ್ಯವಾಗದೇ ಹೋದಾಗ ಕ್ರೈಸ್ತ ಧರ್ಮದಲ್ಲಿ ಗೇಣಿದಾರನಾಗಲು ಅವಕಾಶಗಳಿರುವುದನ್ನು ಶೋಧಿಸುತ್ತಾನೆ. ತನ್ನ ಮಗ ಗುರುವ ಕ್ರೈಸ್ತಮತಕ್ಕೆ ಸೇರಿದ ಗೇಣಿದಾರನಾಗಿರುವುದನ್ನು ಗಮನಿಸುವ ಚೋಮ ತಾನೂ ಮತಾಂತರವಾಗಲು ಮುಂದಾಗುತ್ತಾನೆ. ಈ ಪ್ರಕ್ರಿಯೆಯಲ್ಲಿ ಕಾರಂತರು ಸೂಕ್ಷ್ಮವಾಗಿ ವಿಶ್ಲೇಷಿಸುತ್ತಾರೆ.

ಕುವೆಂಪುರವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿಯೂ ಇದಕ್ಕೆ ನಿದರ್ಶನಗಳು ಸಿಕ್ಕುತ್ತವೆ. ಡಿ.ಆರ್.ನಾಗರಾಜ್‌ರು "ಇಲ್ಲಿ ಭೂ ಮಾಲೀಕರ ಮತ್ತು ಕೆಳವರ್ಗದವರ ನಡುವಿನ ಘರ್ಷಣೆ ಇಡೀ ಕಾದಂಬರಿಯುದ್ದಕ್ಕೂ ಒಳವಿದ್ಯುತ್ತಿನಂತೆ ಹರಿದಿದೆ"[೧೨]. ಎಂದು ಹೇಳುತ್ತಾರೆ. ಅವರು ಮುಂದುವರೆದು "ಪ್ರತಿಯೊಂದು ಘಟನೆಯೂ ಇಲ್ಲಿ ವರ್ಗ ಸಂಬಂಧಗಳ ಹಿನ್ನೆಲೆಯಲ್ಲಿಯೇ ನಡೆಯುತ್ತದೆ. ಜಮೀನುಗಾರ ವರ್ಗದ ವಿವಿಧ ರೀತಿಯ ಹಿಂಸೆಗಳೇ ಇಲ್ಲಿಯ ಮುಖ್ಯ ಘಟನೆಗಳಿಗೆ ಕಾರಣ. ಎಲ್ಲಕ್ಕಿಂತ ಹೆಚ್ಚಾಗಿ ಇಲ್ಲಿ ಲುಂಗೀ ಸಾಬಿ, ಇಜಾರದ ಸಾಬಿ, ಅಜ್ಜೀ ಸಾಬು ಮುಂತಾದವರ ಭೂಮಾಲೀಕ ವರ್ಗದ ಗೂಂಡಾ ಪಡೆಯೂ ಇದೆ. ಇದರ ವಿರುದ್ಧ ಜೀತದವರ, ಒಕ್ಕಲುಗಳ ಕೆಳಜಾತಿಯವರ ಉಗ್ರಪ್ರತಿಭಟನೆಯನೆಯೂ ಇದೆ. ಗುತ್ತಿಯು ಸಾಬಿಯೊಬ್ಬನ ಮೇಲೆ ಹಲ್ಲೆ ಮಾಡಿ ಪೊಲೀಸ್‌ರಿಂದ ತಪ್ಪಿಸಿಕೊಂಡ ಘಟನೆ ಇದಕ್ಕೆ ಸಾಕ್ಷಿ. ಅಷ್ಟೇ ಅಲ್ಲದೆ, ಜಾತಿ ಪದ್ಧತಿಯ ತೆಕ್ಕೆಯಿಂದ ಬಿಡಿಸಿಕೊಳ್ಳಲು ಬ್ರಾಹ್ಮಣೇತರ ಜಾತಿಗಳು ನಡೆಸುತ್ತಿದ್ದ ಪ್ರಯತ್ನದ ಚಿತ್ರಣವೂ ಇಲ್ಲಿ ಅತ್ಯಂತ ಮಾರ್ಮಿಕವಾಗಿ ಬಂದಿದೆ. ಕ್ರೈಸ್ತ ಮತವನ್ನು ಒಪ್ಪಿಕೊಳ್ಳುವುದೆಂದರೆ ಸಾಮಾಜಿಕ ಚಲನೆಗೆ ಏಣಿ ಇದ್ದಂತೆ ಎಂಬ ತಿಳುವಳಿಕೆ ಇಲ್ಲಿಯ ಮತಾಂತರದ ಹಿಂದಿರುವ ಶಕ್ತಿ."[೧೩] ಎಂದು ಹೇಳುತ್ತಾರೆ. ಇದನ್ನು ಹಳೆ ಪೈಕದವರ ತಿಮ್ಮನಾಯ್ಕ ಹಾಗೂ ಸೇಸ ನಾಯ್ಕರು ಭೂಮಿಯ ಒಡೆತನವನ್ನು ಹೊಂದಿರುವುದರ ಬಗೆಗೆ ಹೆಗ್ಗಡೆಯವರಿಗೆ ಇರುವ

ಭಾವನೆ ಒತ್ತುಕೊಡುತ್ತದೆ. ಇದಕ್ಕೆ ಸೇಸನಾಯ್ಕನು ತೋರುವ ಪ್ರತಿರೋಧ ಇಲ್ಲಿನ ವರ್ಗ ಸಂಘರ್ಷದ ಮೂಲಧಾತುವಾಗಿ ಕೆಲಸ ಮಾಡುವುದನ್ನು ಕಾಣಬಹುದಾಗಿದೆ.

"ನಮ್ಮ ದಂಡಿಗೆ ಹಕ್ಕಿಗೆ, ಕುದುರೆಹಕ್ಕಿಗೆ, ಗೌಡಮಕ್ಕಳು ಅಡ್ಡಬರುವುದು ಯಾವ ನ್ಯಾಯ ? ನಾವೇಕೆ ಹೊಡೆದಾಟಕ್ಕೆ ಹೆದರಬೇಕು ? ನಾಳೆ ನನ್ನ ಮಗನ ಮದುವೆ ಮಾಡುವಾಗ ದಂಡಿಗೆ ಸಿಕ್ಕದೆ ಇದ್ದರೂ ಕುದುರೆ ಮೇಲಾದರು ಹೆಣ್ಣು ಗಂಡೂ ಕೂರಿಸಿ ದಿಬ್ಬಣ ತಗೊಂಡು ಹೋಗಲೇ ಬೇಕು. ಜಾತಿಯವರು ನೀವೆಲ್ಲಾ ಸಹಾಯ ಮಾಡಿದರೆ ನಾನೊಂದು ಕೈ ನೋಡೇ ಬಿಡ್ತೀನಿ."[೧೪]

ಈ ಮಾತುಗಳಲ್ಲಿರುವ ಆಕ್ರೋಶ ಬ್ರಾಹ್ಮಣೇತರ ಜಾತಿಗಳ ಒಳ ಬಂಡಾಯವಾಗಿ ಕೆಲಸ ಮಾಡುತ್ತದೆ. ಇದು ದೇವಯ್ಯನು ತಮ್ಮ ಜಾತಿಗೆ ಸಿಕ್ಕಬೇಕಾದ ಗೌರವಾದರಗಳು, ಸಿಗಬೇಕಾದ ಪರಿಹಾರವನ್ನು ಮತಾಂತರ ಪ್ರಕ್ರಿಯೆಯಲ್ಲಿ ಕಾಣುತ್ತಾನೆ.

ಹೀಗೆ ನವೋದಯ ಕಾದಂಬರಿಗಳಲ್ಲಿನ ಮತಾಂತರ ಪ್ರಕ್ರಿಯೆಗೆ ವರ್ಗ ಸಂಘರ್ಷದ ನೆಲೆಯೊಂದು ಪ್ರಾಪ್ತವಾಗುತ್ತದೆ. ಇಲ್ಲೆಲ್ಲಾ ಅವು ಕೆಳವರ್ಗದ ಪರವಾದ ಧ್ವನಿಯನ್ನು ವ್ಯಕ್ತಪಡಿಸಿರುವುದನ್ನು ಕಾಣಬಹುದಾಗಿದೆ. ನವೋದಯ ಕಾದಂಬರಿಗಳಲ್ಲಿ ಈ ವರ್ಗಸಂಘರ್ಷವೇ ಮತಾಂತರದ ಪ್ರಮುಖ ಆಯಾಮವಾಗಿ ಬೆಳೆಯುತ್ತದೆ.

ನವೋದಯ ಕಾದಂಬರಿಗಳಲ್ಲಿನ ಮತಾಂತರ ಪ್ರಕ್ರಿಯೆಗಳಿಗೆ ವಿಭಿನ್ನ ನೆಲೆಗಳಲ್ಲಿ ಪ್ರತಿಕ್ರಿಯಿಸುವ ಲೇಖಕರು ಎಲ್ಲಿಯೂ ಏಕಮುಖೀ ನಿರ್ಧಾರಗಳಿಗೆ ಕಟ್ಟುಬೀಳುವುದಿಲ್ಲ. ಬದಲಾಗಿ ಒಂದು ಸಾರ್ವತ್ರಿಕ ಮಾನವೀಯತೆಯ ನೆಲೆಯಲ್ಲಿ ಮತಾಂತರ ಪ್ರಕ್ರಿಯೆಯನ್ನು ಚರ್ಚಿಸುತ್ತಾರೆ.

## ಟಿಪ್ಪಣಿಗಳು

೧. ನೆನಪಿನ ದೋಣಿಯಲ್ಲಿ, ಪುಟ–೨೭–೨೮.

೨. ಮಲೆಗಳಲ್ಲಿ ಮದುಮಗಳು, ಪುಟ–೧೯೬–೧೯೭

೩. ಅದೇ. ಪುಟ–೨೭೯–೨೮೦

೪. ಇಂದಿರಾಬಾಯಿ, ಪುಟ–೧೨೮

೫. ಕಾನೂರು ಹೆಗ್ಗಡತಿ, ಪುಟ–೨೪

೬. ಖಾಸಗಿ ವಿಮರ್ಶೆ, ಪುಟ – ೫೧

೭. ಮಲೆಗಳಲ್ಲಿ ಮದುಮಗಳು, ಪುಟ–೬೮೪–೬೮೫

೮. ಹಿಂದುತ್ವ : ಉದ್ಭವಿಸುತ್ತಿರುವ ಫ್ಯಾಸಿಸಂ ಮತ್ತು ಇತರ ಲೇಖನಗಳು, ಪುಟ–೨೩–೨೪.

೯. ಮಲೆಗಳಲ್ಲಿ ಮದುಮಗಳು, ಪುಟ ೬೯೫–೬೯೬

೧೦. ಚೋಮನದುಡಿ, ಪುಟ ೯೭

೧೧. ಅದೇ. ಪುಟ–೨೦–೨೧

೧೨. ಅಮೃತ ಮತ್ತು ಗರುಡ, ಪುಟ–೨೫

೧೩. ಅದೇ. ಪುಟ–೨೫

೧೪. ಮಲೆಗಳಲ್ಲಿ ಮದುಮಗಳು, ಪುಟ–೧೧

# ಅಧ್ಯಾಯ-೫

## ಮತಾಂತರ : ಸಮಕಾಲೀನ ಸಂಕಥನಗಳ ವಿಶ್ಲೇಷಣೆ

ನವೋದಯ ಕಥನ ಸಾಹಿತ್ಯವು ತನ್ನ ಕಾಲದ ಮತಾಂತರಕ್ಕೆ ತೋರಿದ ಪ್ರತಿಕ್ರಿಯೆಯು ಆ ಕಾಲದ ಒತ್ತಡಗಳೊಂದಿಗೆ ಬೆರೆತಿರುವಂತದ್ದು, ವಸಾಹತುಶಾಹಿಯ ಸಾಮ್ರಾಜ್ಯಶಾಹಿಯ ನಿಲುವುಗಳೊಂದಿಗೆ ಬೆರೆತಿದ್ದ ಮತಾಂತರ ಪ್ರಕ್ರಿಯೆಯನ್ನು ಅದರ ಇತರ ತಂತ್ರಗಾರಿಕೆಯ ನೆಲೆಗಟ್ಟಿನಲ್ಲಿಟ್ಟು ಅದನ್ನು ವಿರೋಧಿಸುತ್ತದೆ. ವಸಾಹತುಶಾಹಿಯ ಭಾರತೀಯ ಸಮುದಾಯಗಳ ಮೇಲೆ ತನ್ನ ಸಂಸ್ಕೃತಿಯನ್ನು ಹೇರುವುದರ ಹಿಂದೆ ಧರ್ಮ ಪ್ರಸರಣ ಹಾಗೂ ರಾಜಕೀಯ ಅಧಿಕಾರಿಗಳ ಸುಭದ್ರತೆಯ ಉದ್ದೇಶಗಳು ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕವಾಗಿ ಭಾರತದಲ್ಲಿ ಅನೇಕ ಸ್ಥಿತ್ಯಂತರಗಳಿಗೆ ಕಾರಣವಾದವು. ವಸಾಹತುಶಾಹಿಗಳಿಂದಾದ ಒತ್ತಡಗಳಿಂದ ಬಿಡಿಸಿಕೊಂಡು ಇಡೀ ದೇಶ ಸ್ವತಂತ್ರ್ಯಗೊಳ್ಳಬೇಕಾದ ಅನಿವಾರ್ಯತೆಯು ಆಗ ಭಾರತೀಯ ಸಮಾಜಕ್ಕಿತ್ತು. ಈ ಬಿಡುಗಡೆಯ ಸ್ವತಂತ್ರ್ಯಕ್ಕಾಗಿ ಅದು ತನ್ನ ಎಲ್ಲಾ ಸ್ತರಗಳನ್ನು ಪೂರಕವಾಗಿ ಬಿಡಿಸಿಕೊಳ್ಳುತ್ತಾ ಹೋಯಿತು. ಆದರೆ ಒಂದು ರಾಷ್ಟ್ರ, ಒಂದು ಪರಂಪರೆ ಒಂದು ಧರ್ಮ ಹೀಗೆ ಅನೇಕ ಮುಖವಾಣಿಗಳನ್ನು ಅದು ಸೃಷ್ಟಿಸಿಕೊಂಡಿತು. ಇವುಗಳ ಮೂಲಕ ವಸಾಹತುಶಾಹಿಗೆ ಸಾಮಾಜಿಕ ಚಳುವಳಿಗಳು ಇದಕ್ಕೆ ಪೂರಕವಾಗಿ ಸಾಹಿತ್ಯಕ ಚಳುವಳಿಗಳ ರೂಪ ಪಡೆದವು.

ವಸಾಹತುಶಾಹಿಯ ಮುಖ್ಯ ಆಕ್ರಮಣಕಾರಿ ನೆಲೆಗಳಲ್ಲಿ ಅದು ಹೊತ್ತು ತಂದ ಕ್ರೈಸ್ತ ಧರ್ಮ ಪ್ರಮುಖವಾದದ್ದು. ಕ್ರೈಸ್ತಧರ್ಮ ಆಳುವ ವರ್ಗದ ಬೆಂಬಲದಿಂದ ಇಲ್ಲಿ ನೆಲೆಗೊಳಿಸಿದ ತಂತ್ರಗಾರಿಕೆಯ ನವೋದಯ ಸಾಹಿತ್ಯವು ಪ್ರತಿಕ್ರಿಯಿಸಿದ ಕ್ರಮವೇ ವಿಚಿತ್ರವಾದದ್ದು. ವಸಾಹತುಶಾಹಿಯ ಧರ್ಮ ಪ್ರಚಾರ ತನ್ನ ಸಾಮ್ರಾಜ್ಯ ವಿಸ್ತರಣಾ ತಂತ್ರಗಳಲ್ಲಿ ಒಂದೆಂದು ಭಾವಿಸಿದಾಗ ಇಂತಹ ಒಂದು ಆಕ್ರಮಣಕಾರಿ ತಂತ್ರಕ್ಕೆ ಪ್ರತಿರೋಧವನ್ನು ಒಡ್ಡಲೇಬೇಕಾದ ಅನಿವಾರ್ಯತೆ ಇದ್ದುದನ್ನು ಗಮನಿಸಬೇಕಾಗುತ್ತದೆ. ವಸಾಹತುಶಾಹಿಯ ಸಂದರ್ಭದಲ್ಲಿ ಮತಾಂತರ ಪ್ರಕ್ರಿಯೆ ಉಂಟಾದ ಪ್ರತಿಕ್ರಿಯಿಗೆ ಆಯಾ ಕಾಲಘಟ್ಟದ ಒತ್ತಡಗಳು ಕಾರಣ. ಹಾಗೆಯೇ ಪ್ರಸ್ತುತ ಮತಾಂತರ ಕುರಿತ ಚರ್ಚೆಗೆ ಇರಬಹುದಾದ ಒತ್ತಡಗಳೇನು ? ಎಂಬುದನ್ನು ಈ ಅಧ್ಯಾಯದಲ್ಲಿ ಶೋಧಿಸಲಾಗುತ್ತದೆ.

**ಜಾಗತೀಕರಣ ಸ್ವರೂಪ** : ಪ್ರತಿರೋಧದ ಮಾದರಿಗಳು ವಸಾಹತುಶಾಹಿಯಂತೆಯೇ ಇಂದು ನಮ್ಮನ್ನು ಆಕ್ರಮಿಸಿರುವ ಒಂದು ವ್ಯವಸ್ಥೆ ಜಾಗತೀಕರಣ. ಇದು ನಿರ್ದಯ ಉದಾರೀಕರಣದ ರೂಪದಲ್ಲಿನ ಒಂದು ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆ. ಇದು ಸಮಾಜದ ಸ್ಥಳೀಯ ಆಕೃತಿಗಳನ್ನೆಲ್ಲಾ ಸಂಪೂರ್ಣ ನಾಶಮಾಡುವ ಗುಣವುಳ್ಳದ್ದು ಜಾಗತೀಕರಣದಿಂದ ಇಂದು ಶಿಕ್ಷಣ, ಉದ್ಯೋಗ, ಆರ್ಥಿಕತೆ, ರಾಜಕೀಯ ಕ್ಷೇತ್ರಗಳಲ್ಲಿ ತೀವ್ರವಾದ ಅಸ್ಥಿರತೆಗಳು ಸೃಷ್ಟಿಯಾಗಿ ವರ್ತಮಾನ ಅತ್ಯಂತ ತಳಮಳಗೊಳ್ಳುವಂತಾಗಿದೆ. ಜಾಗತೀಕರಣ ತನ್ನ ಅಂತರಾಷ್ಟ್ರೀಯ ಮಾರುಕಟ್ಟೆ ಶಕ್ತಿಯನ್ನು ಸ್ಥಳೀಯ ಆರ್ಥಿಕ ಸಂರಚನೆಗಳ ಮೇಲೆ ಪೈಪೋಟಿಯಂತೆ ಆಕ್ರಮಣ ನಡೆಸುವುದರಿಂದ ಅಭದ್ರತೆಗಳು ಎಲ್ಲಾ ಸಮುದಾಯಗಳನ್ನು ಕಾಡುತ್ತಿವೆ. ಇದರಿಂದಾಗಿ ಇಂದು ಭಾಷೆ, ಸಂಸ್ಕೃತಿ, ಪರಂಪರೆ, ಸ್ಥಳೀಯ ಬದುಕುಗಳು ವಿಚಿತ್ರವಾದ ಸಂಕಷ್ಟಗಳಲ್ಲಿ ನರಳುತ್ತಿರುವುದನ್ನು ಕಾಣಬಹುದು. ಇದಕ್ಕೆ ಜಾಗತೀಕರಣವು ಸಮಾಜವೊಂದರಲ್ಲಿ ತನ್ನ ಬಂಡವಾಳ ಶಕ್ತಿಯಿಂದ ವಿಚಿತ್ರವಾದ ವ್ಯಾಮೋಹಗಳನ್ನು ಸೃಷ್ಟಿಮಾಡಿ ಸಂಸ್ಕೃತಿಯೊಂದಕ್ಕೆ ತನ್ನ ತನದ ಮೇಲೆ ಅಸಹ್ಯಭಾವ ಉಂಟಾಗುವಂತೆ ಮಾಡುತ್ತದೆ. ಇದು ವಸಾಹತುಶಾಹಿಯ ವಿಸ್ತೃತರೂಪವೇ ಆಗಿದೆ. ಜಾಗತೀಕರಣದಿಂದುಂಟಾಗುವ ಒತ್ತಡಗಳಿಂದಾಗಿ ಇಂದು ತೃತೀಯ ಜಗತ್ತಿನಲ್ಲಿ ಮತೀಯವಾದಗಳು ವಿಚಿತ್ರ ಬಗೆಯಲ್ಲಿ ತಲೆ ಎತ್ತುತ್ತಿರುವುದನ್ನು ಕಾಣಬಹುದು. ಜಾಗತೀಕರಣ ಉಂಟುಮಾಡುತ್ತಿರುವ ತಲ್ಲಣಗಳಿಂದ ಮತಾಂತರ ಎಂಬ ಕಲ್ಪಿತ ಸಮಸ್ಯೆ ಉಂಟಾಗಿದೆ ಎಂದೆನಿಸುತ್ತದೆ. ಏಕೆಂದರೆ ಜಾಗತೀಕರಣವು ಸಾಂಸ್ಕೃತಿಕವಾಗಿ ನೀಡುವ ಹೊಡೆತಗಳು ಧಾರ್ಮಿಕತೆಗೆ ನೀಡುವ ಪೆಟ್ಟು ವಿಚಿತ್ರವಾದದ್ದು. ಅದು ತಮ್ಮ ಸಮುದಾಯಗಳನ್ನು ತಮ್ಮದಲ್ಲದ ವ್ಯಾಮೋಹಗಳಿಗೆ ತಳ್ಳಿ ಆ ಮೂಲಕ ತಾನು ನಂಬಿಕೊಂಡು ಬಂದಿದ್ದ ಧಾರ್ಮಿಕ ಆಚರಣಾ ಲೋಕವೊಂದನ್ನು ನಿರ್ನಾಮ ಮಾಡುತ್ತದೆ. ಇದರ ವಿರುದ್ಧದ ಪ್ರತಿರೋಧಗಳು ಪಾಶ್ಚಾತ್ಯ ಸಂಸ್ಕೃತಿ ವರ್ಸಸ್ ದೇಶೀಯ ಸಂಸ್ಕೃತಿಗಳೆಂಬ ನೆಲೆಗಳಲ್ಲಿ ಚರ್ಚಿತವಾಗುವುದನ್ನು ಕಾಣುತ್ತೇವೆ. ಪ್ರತಿರೋಧದ ಮಾದರಿಗೂ ಪ್ರಸ್ತುತ ಮತಾಂತರದ ಚರ್ಚೆಗೂ ಸಂಬಂಧವಿಲ್ಲವೆನಿಸುತ್ತದೆ. ಯಾಕೆಂದರೆ ಇಂದು ಭಾರತದಲ್ಲಿ ಮತಾಂತರವೊಂದು ಬಂಡವಾಳಶಾಹಿಯ ರೂಪವಾಗಿ ಉಳಿದಿಲ್ಲ. ಹಾಗೆಯೇ ವಸಾಹತುಶಾಹಿಯು

ಮತಾಂತರವನ್ನು ಒಂದು ಪ್ರಮುಖ ದಾಳವನ್ನಾಗಿ ಬಳಸಿದಂತೆ ಜಾಗತೀಕರಣ ಬಳಸದು.

"ಊಳಿಗಮಾನ್ಯ ವಸಾಹತುಶಾಹಿಯಲ್ಲಿ ಹುಟ್ಟಿದ ಅನುಭವ, ಮನುಷ್ಯ ಸಮುದಾಯದಲ್ಲಿ ಚಾರಿತ್ರಿಕವಾಗಿ ಅನೇಕ ಬಗೆಯ ಸಂಬಂಧಗಳನ್ನು ಹುಟ್ಟು ಹಾಕಿದ್ದರಿಂದ ಅಂತ ಅನುಭವಗಳ ರೀತಿ ನೀತಿ ಜಾಗತೀಕರಣದ ಈ ಸಂದರ್ಭಕ್ಕಿಂತ ಭಿನ್ನವಾದವು. ಹಾಗಾಗಿಯೇ ವಸಾಹತುಶಾಹಿಯ ಸಂದರ್ಭದಲ್ಲಿ ನಲುಗಿದ ಮನುಷ್ಯ ಜಾಗತೀಕರಣದಲ್ಲಿ ಭಯಪಡಲು ಸಾಧ್ಯವಿಲ್ಲ. ಯಾಕೆಂದರೆ ಈಗ ಜಾಗತೀಕರಣಕ್ಕೆ ಕೇಂದ್ರ ವೃತ್ತಾಂತ ಎನ್ನಬಹುದಾದ ಯಾವ ಅನುಭವದ ಸುಳಿ ಕೂಡ ಇಲ್ಲ. ಅದು ಹರಿದತ್ತ ಹೋಗಿ ಬದುಕನ್ನು ಬದಲಿಸುವ ಸುಂಟರ ಗಾಳಿಯಂತದ್ದು. ಈ ವ್ಯವಸ್ಥೆಯಲ್ಲಿ ಸ್ವತಂತ್ರ್ಯ ಸಂಗ್ರಾಮದಂತಹ ರಕ್ತಪಾತವಿಲ್ಲ" ಆದರೆ ಜಾಗತೀಕರಣ ಸಮುದಾಯಗಳಲ್ಲಿ ಉಂಟಾಗುತ್ತಿರುವ ವಿಚಿತ್ರ ಒತ್ತಡಗಳು, ಅಸ್ಥಿರತೆಗಳು ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಧಾರ್ಮಿಕತೆಗಳ ಬಗೆಗೆ ಚಿಂತಿಸುವಂತೆ ಮಾಡಿದೆ.

ವಸಾಹತುಶಾಹಿಯ ವಿಸ್ತೃತರೂಪಗಳು ಭವಿಷ್ಯದಲ್ಲಿ ಹೀಗೆಲ್ಲ ಬೆಳೆಯುತ್ತವೆ ಎಂದು ಚಿಂತಿಸಿದವರು ಗಾಂಧಿ. ಅವರು ತಮ್ಮ "ಹಿಂದ್ ಸ್ವರಾಜ್" ನಲ್ಲಿ ಆಧುನಿಕ ಯಂತ್ರಗಾರಿಕೆಯು ತಂದೊಡ್ಡುವ ಅಪಾಯಗಳ ಕುರಿತು ಚರ್ಚಿಸುತ್ತಾರೆ. ಈ ಯಂತ್ರಗಾರಿಕೆ ನಾಗರೀಕತೆಯನ್ನು ಸಂಪೂರ್ಣವಾಗಿ ವಿರೋಧಿಸುವ 'ಗ್ಲೋಬಲ್' ಗೆ ಪರ್ಯಾಯವಾಗಿ 'ಲೋಕಲ್' ನ್ನು ಪ್ರತಿಪಾದಿಸಿದರು. ಬಂಡವಾಳಶಾಹಿಯ ಮುಕ್ತ ಆಯ್ಕೆಗಳ ಅವಕಾಶಗಳೆಂದು ಕರೆದುಕೊಳ್ಳುವ ವಾಸ್ತವದಲ್ಲಿ ಜಗತ್ತಿನಾದ್ಯಂತ ಏಕೈಕ ರೀತಿಯ ರುಚಿಯನ್ನು ಉಪಯೋಗದ ಮಾದರಿಯನ್ನು ಸೃಷ್ಟಿಸುವ ಹಾಗೂ ಪ್ರತಿಷ್ಠಿತ ಸಂಸ್ಕೃತಿಯೊಂದರ ಜೀವನ ಕ್ರಮವನ್ನು ಉಳಿದೆಲ್ಲ ಸಂಸ್ಕೃತಿಗಳ ಮೇಲೆ ಸಮ್ಮೋಹನ ತಂತ್ರದ ಮೂಲಕ ಹೇರುವ ತಂತ್ರಗಾರಿಕೆ ವಿರುದ್ಧ ಗಾಂಧಿಯ ತೀವ್ರ ಪ್ರತಿರೋಧವಿತ್ತು. ಆಧುನಿಕತೆಯ ವಿರುದ್ಧ ಗಾಂಧಿಯ ಪ್ರತಿರೋಧದ ಕ್ರಮಗಳು ವರ್ತಮಾನದ ಜಾಗತೀಕರಣ ಸಂದರ್ಭದಲ್ಲಿ ಎರಡು ಮಾದರಿಗಳಾಗಿ ರೂಪಗೊಳ್ಳುವುದನ್ನು ಡಿ.ಆರ್.ನಾಗರಾಜ್‌ರ "ಆತಂಕಿತ ಹಿಂದೂ ಮತ್ತು ಕುಪಿತ ರೈತ" ಎಂಬ ಲೇಖನದಲ್ಲಿ ವಿಸ್ತಾರವಾಗಿ ಚರ್ಚಿಸುತ್ತಾರೆ. ಅವರು "ಭಾರತೀಯ ರಾಜಕಾರಣದಲ್ಲಿ, ಜಾಗತೀಕರಣ ವಿಷಯದಲ್ಲಿ ಎರಡು ಪ್ರಮುಖ ಪ್ರತಿಸ್ಪಂದನೆಗಳನ್ನು ಗುರುತಿಸಬಹುದು. ಒಂದು:

ಸಂಪ್ರದಾಯದ ಹಿಂದೂ ಅಭಿವ್ಯಕ್ತಿ ಇದು ಸಾಂಸ್ಕೃತಿಕ ದೇಶೀಯವಾದಿಯೆನ್ನುವ ಸೋಗನ್ನು ತೋರುವಂಥದ್ದು. ಇದನ್ನು ನಾನು ಸಂಘ-ಸ್ವದೇಶಿ ಪ್ರತಿಪಾದನೆ ಎಂದು ಕರೆಯುತ್ತೇನೆ. ಹಿಂದೂವಾದಿ ರಾಜಕೀಯ ಸಂಘಟನೆ ಹಾಗೂ ಚಳುವಳಿಗಳ ಸಮೂಹವಾದಿ ಬಲಪಂಥೀಯ ಸಂಘ ಪರಿವಾರದ ಅಂಗ ಸಂಸ್ಥೆಯಾದ ಸ್ವದೇಶಿ ಜಾಗರಣ ಮಂಚ ಇಂಥದ್ದೊಂದು ಪ್ರಾತಿನಿಧಿಕ ಮಾದರಿ. ಎರಡು: ಆರ್ಥಿಕ ಉದಾರೀಕರಣ ನೀತಿಯಿಂದಾಗಿ ನೇರವಾಗಿ ಸಂಕಷ್ಟಕ್ಕೊಳಗಾದ ಸಮುದಾಯಗಳ ರಾಜಕೀಯಾತ್ಮಕ ಹೋರಾಟ ಅಭಿವ್ಯಕ್ತಿ. ಕರ್ನಾಟಕದ ರೈತ ಸಂಘ ಈ ಆಂದೋಲನದ ಮುಂಚೂಣಿಯಲ್ಲಿದೆ; ಅದರ ಅತ್ಯುಚ್ಚ ನಿದರ್ಶನವಾಗಿದೆ"[೨] ಎಂದು ಜಾಗತೀಕರಣಕ್ಕೆ ಎರಡು ಪ್ರತಿಸ್ಪಂದನೆಗಳು ರೂಪುಗೊಳ್ಳುವ ಸಾಂಸ್ಕೃತಿಕ ರಾಜಕಾರಣದ ಆಯಾಮದಲ್ಲಿ ಗಾಂಧಿಯ ಪ್ರಭಾವಗಳನ್ನು ಇವು ಹೇಗೆ ಕಟ್ಟಿಕೊಳ್ಳುತ್ತವೆ ಎಂದು ಚರ್ಚಿಸುತ್ತಾರೆ. ಈ ಪ್ರಭಾವಗಳನ್ನು ಗುರುತಿಸಲು ಡಿ.ಆರ್.ನಾಗರಾಜ್‌ರು ಜಗತ್ತಿನಾದ್ಯಂತ ಜಾಗತೀಕರಣಕ್ಕೆ ಪ್ರತಿಸ್ಪಂದನೆಯಾಗಿ ರೂಪುಗೊಂಡಿರುವ ಮೂರು ವಿಭಿನ್ನ ರೀತಿಯ ಸ್ವಂತಿಕೆಯ ಕಥನಗಳನ್ನು ವಿವರಿಸುತ್ತಾರೆ. ಜಾಗತೀಕರಣಕ್ಕೆ ತೋರುವ ಪ್ರತಿರೋಧಗಳ (೧) ಆಸೆಯನ್ನಾಧರಿಸಿಕೊಂಡು (೨) ಹಸಿವೆಯನ್ನಾಧರಿಸಿಕೊಂಡು (೩) ಅರ್ಥವನ್ನಾಧರಿಸಿಕೊಂಡು ಹುಟ್ಟುತ್ತವೆ ಎಂದು ಹೇಳುತ್ತಾರೆ. ಈ ಮೂರು ಸ್ವಂತಿಕೆಯ ಕಥನಗಳು ಗಾಂಧಿಯಲ್ಲಿ ಮೈತಾಳಿವೆ. ಇವುಗಳಲ್ಲಿ ಆಸೆಯನ್ನಾಧರಿಸಿದ ಕಥನವು ಸಂಘ ಪರಿವಾರದ್ದು. ಜಾಗತೀಕರಣದ ಮೂಲಭೂತ ಸಂರಚನೆಯಲ್ಲೂ ಇದೆ ಆಗಿರುವುದರಿಂದ ಇದು ಜಾಗತೀಕರಣದ ಜೊತೆಗೆ ಪಾಲುದಾರನಾಗುವ ಉದೇಶ ಹೊಂದಿದೆ. ಹೊರ ನೋಟಕ್ಕೆ ಜಾಗತೀಕರಣವನ್ನು ತೀವ್ರವಾಗಿ ಪ್ರತಿರೋಧಿಸುವಂತೆ ಕಂಡರೂ "ಪ್ರತಿರೋಧಿಸುವ ಶಕ್ತಿಯ ಗಮನ ಸೆಳೆದು ಅದರ ಮಾನ್ಯತೆಯನ್ನು ಗೆಲ್ಲುವ ತಂತ್ರಗಾರಿಕೆ ಮಾತ್ರವಾಗಿರುತ್ತದೆ"[೩] ಎನ್ನುತ್ತಾರೆ. ಹಾಗಾಗಿ ಗಾಂಧಿಯ ಆಧ್ಯಾತ್ಮಿಕ ಮಾದರಿಯ ಪ್ರತಿರೋಧದ ಮಾದರಿಯನ್ನು ಇದು ತನ್ನದೆಂಬಂತೆ ಬಳಸುತ್ತದೆ. ಇದಕ್ಕೆ ಗಾಂಧಿಯು ಬಳಸಿದ ಹಸಿವೆಯನ್ನಾಧರಿಸಿದ ಪ್ರತಿರೋಧದ ಮಾದರಿಗಳನ್ನು ಗೌಣವಾಗಿಸುತ್ತದೆ. ಇದನ್ನು ಸಾಮಾಜಿಕವಾಗಿ ಸಮುದಾಯಗಳು ಜಾಗತೀಕರಣದಿಂದ ಎದುರಿಸುತ್ತಿರುವ ತಲ್ಲಣಗಳಿಗೆ ಚಳುವಳಿಗಳ ರೂಪದಲ್ಲಿ ಅದರ ಆರ್ಥಿಕ ರಾಜಕೀಯ ಉದಾರೀಕರಣ ನೀತಿಗಳಿಗೆ ಪ್ರತಿರೋಧಿಸುವಲ್ಲಿ ಗಾಂಧಿ ಪ್ರಭಾವವನ್ನು ಹೇಗೆ ಬಳಸಿಕೊಳ್ಳುತ್ತವೆ ಎಂದು ಡಿ.ಆರ್.ನಾಗರಾಜ್ ಚರ್ಚಿಸುತ್ತಾರೆ. ಹಾಗಾಗಿ

ಜಾಗತೀಕರಣದ ಮುಖ್ಯ ಆಕ್ರಮಣಕಾರಿ ನೆಲೆಗಳಿರುವುದು ಸಮಾಜವೊಂದರ ಸಂಪನ್ಮೂಲಗಳು ಹಾಗೂ ಅದರಿಂದ ಬರುವ ಆರ್ಥಿಕ ಲಾಭದ ಮೇಲೆ ಆದ್ದರಿಂದ ಮತಾಂತರವನ್ನು ಅದು ತನ್ನ ದಾಳವನ್ನಾಗಿ ಬಳಸುವುದಿಲ್ಲ. ಆದರೆ ಜಾಗತೀಕರಣದಿಂದುಂಟಾಗುತ್ತಿರುವ ಒತ್ತಡಗಳು ಸಮಾಜದಲ್ಲಿ ಮತೀಯವಾದ ಶಕ್ತಿಗಳನ್ನು ಹುಟ್ಟು ಹಾಕುತ್ತದೆ. ಈ ಶಕ್ತಿಗಳೇ ಇಂದು ಮತಾಂತರವನ್ನು ಒಂದು ಚರ್ಚೆಯ ವಸ್ತುವನ್ನಾಗಿ ಮಾಡುತ್ತಿವೆ.

**ಮತಾಂತರ ಸ್ವರೂಪದ ಚರ್ಚೆ**

ಜಾಗತೀಕರಣ ವಿರೋಧದಲ್ಲಿ ಹುಟ್ಟುವ ಪ್ರಮುಖ ಎರಡು ಸ್ಪಂದನೆಯ ಮಾದರಿಗಳು ಪ್ರಸ್ತುತ ಮತಾಂತರದ ಚರ್ಚೆಯಲ್ಲಿ ಪಾಲ್ಗೊಳ್ಳುವುದನ್ನು ನೋಡಬಹುದು. ಈ ಮಾದರಿಗಳಲ್ಲಿ ಒಂದು 'ಹಿಂದೂ ಕೋಮುವಾದಿ ಚಿಂತನೆ' ಇದು ಸಮಗ್ರ ಭಾರತೀಯತೆಯನ್ನು ಧಾರ್ಮಿಕವಾಗಿ ಗುರುತಿಸಿಕೊಳ್ಳುತ್ತದೆ. ಭಾರತೀಯ ಸಂಸ್ಕೃತಿಯ ಸಮುದಾಯದ ವೈಶಿಷ್ಟ್ಯದ ಅಂಶಗಳನ್ನು ರಕ್ಷಿಸುವ ಸೋಗನ್ನು ಹಾಕುತ್ತದೆ. ಅದಕ್ಕಾಗಿ ಸ್ವದೇಶಿ ದೇಶ ಭಕ್ತಿಗಳನ್ನು ಸೀಮಿತಾರ್ಥಗಳಲ್ಲಿ ಬಳಸಿಕೊಳ್ಳುತ್ತದೆ. ಇದಕ್ಕೆ ತದ್ವಿರುದ್ಧ ಎನ್ನಬಹುದಾದ ಮತ್ತೊಂದು ಚಿಂತನೆ ಪ್ರಸ್ತುತ ಮತಾಂತರದ ಚರ್ಚೆಯಲ್ಲಿ ಪಾಲ್ಗೊಳ್ಳುತ್ತದೆ. ಅದು 'ಪ್ರಗತಿಪರ' ಚಿಂತನೆ. ಇದು ಕೋಮುವಾದಿ ಚಿಂತನೆಯಂತೆ ಧಾರ್ಮಿಕ ಪರಿಭಾಷೆಯಲ್ಲಿ ಮಾತನಾಡದೆ ಸಮುದಾಯಗಳ ಸಾಮಾಜಿಕ, ಆರ್ಥಿಕ, ರಾಜಕೀಯ ಪರಿಸರಗಳ ಕೇಂದ್ರದಲ್ಲಿ ಮತಾಂತರ ಪ್ರಕ್ರಿಯೆಗಳ ಚರ್ಚೆಯನ್ನು ಮಾಡುತ್ತದೆ. ಇದಕ್ಕೆ ಕೋಮುವಾದಿ ಚಿಂತನೆ ಮಾತನಾಡುವ ಧಾರ್ಮಿಕ ಪರಿಭಾಷೆಯ ಬಗ್ಗೆ ಅನುಮಾನಗಳಿವೆ, ಪ್ರಶ್ನೆಗಳಿವೆ ಹಾಗೂ ಪ್ರತಿರೋಧಗಳಿವೆ. ಇದು ಜಾಗತೀಕರಣದಂತಹ ಬೃಹತ್ ಬಂಡವಾಳಶಾಹಿ ಶಕ್ತಿಗಳು ಸೃಷ್ಟಿಸುವ ಸಮಾಜದ ಆರ್ಥಿಕ ಅಸಮಾನತೆಗಳ ವಿರುದ್ಧ ಹೋರಾಟದ ಎಲ್ಲಾ ಸಮುದಾಯಗಳು ಒಟ್ಟಾಗಬೇಕಾದ ಅಗತ್ಯವನ್ನು ಕುರಿತು ಮಾತಾಡುತ್ತದೆ.

ಕೋಮುವಾದಿ ಚಿಂತನೆ ಇಂತಹ ಒಂದು ಅವಕಾಶವನ್ನೆ ನಾಶ ಮಾಡಿ ಸಮುದಾಯ ಛಿದ್ರೀಕರಣ ನೀತಿಯನ್ನು ಅನುಸರಿಸುತ್ತದೆಂಬ ನೆಲೆಯಲ್ಲಿ ಪ್ರಗತಿಪರ ಚಿಂತನೆ ಮತ್ತು ಮತಾಂತರದ ವಾಗ್ವಾದವನ್ನು ಕೋಮುವಾದಿ ಶಕ್ತಿ ವಿರುದ್ಧ ಮಾಡುತ್ತದೆ.

ಪ್ರಸ್ತುತ ಮತಾಂತರ ಚರ್ಚೆಯಲ್ಲಿ ರೂಪುಗೊಂಡಿರುವ ಈ ಎರಡು ಧಾರೆಗಳ ಪದಪುಂಜಗಳು ಒಂದು ಚಿಂತನೆ ತನ್ನ ಎದುರಾಳಿ ಚಿಂತನೆಗಳನ್ನು ಗುರುತಿಸುವಾಗ ರೂಪುಗೊಂಡಿರುವಂತಹವು. ಮತಾಂತವನ್ನು ವಿರೋಧಿಸುತ್ತಿರುವ ಚಿಂತನೆಯನ್ನು ಕೋಮುವಾದಿ ಚಿಂತನೆ ಎಂದು ಅರ್ಥೈಸುತ್ತಾ ಮತಾಂತರಕ್ಕಿರಬಹುದಾದ ಸಾಮಾಜಿಕ ಏಣಿಶ್ರೇಣಿ ವ್ಯವಸ್ಥೆಯ ಸಾಧ್ಯತೆಗಳನ್ನು ಗುರ್ತಿಸುವುದು ಪ್ರಗತಿಪರ ಚಿಂತನೆ. ಈ ಪ್ರಗತಿಪರ ಎಂಬ ಹಣೆಪಟ್ಟಿಯನ್ನು ಮತಾಂತರವನ್ನು ವಿರೋಧಿಸುವ ಚಿಂತನೆ ಹುಟ್ಟುಹಾಕುತ್ತದೆ. ಈ ಎರಡು ಚಿಂತನೆಗಳು 'ಬಹುಸಂಖ್ಯಾತ' ಹಾಗೂ ಅಲ್ಪಸಂಖ್ಯಾತ ಎಂಬ ಎರಡು ಪರಿಕಲ್ಪನೆಗಳಲ್ಲಿ ಮತಾಂತರದ ಚರ್ಚೆಯನ್ನು ಆರಂಭಿಸುತ್ತವೆ. ಮತಾಂತರವು ಭಾರತದಲ್ಲಿ ಅಲ್ಪ ಸಂಖ್ಯಾತರೆನಿಸಿಕೊಂಡಿರುವ ಮುಸ್ಲಿಂ ಹಾಗೂ ಕ್ರಿಶ್ಚಿಯನ್ನರಿಂದ ಚರಿತ್ರೆಯುದ್ದಕ್ಕು ನಡೆದಿದೆ ಎಂದು ಹೇಳುತ್ತಾ ಕೋಮುವಾದಿ ಚಿಂತನೆ ಅಲ್ಪಸಂಖ್ಯಾತ ಸಮುದಾಯಗಳ ವಿರುದ್ಧ ಸಂಘರ್ಷವನ್ನು ಘೋಷಿಸುತ್ತದೆ. ಆ ಮೂಲಕ ಮತಾಂತರ ಪ್ರಕ್ರಿಯೆಗಳಿಂದ ಆತಂಕಕ್ಕೊಳಗಾಗುತ್ತಿರುವ ಬಹುಸಂಖ್ಯಾತ ಹಿಂದು ಧರ್ಮವನ್ನು ಸಂರಕ್ಷಿಸುವ ಸಾಧ್ಯತೆಗಳ ಅಜೆಂಡಾಗಳನ್ನು ಮಂಡಿಸುತ್ತದೆ. ಇದಕ್ಕೆ ಪೂರಕವಾಗಿ ಕಳೆದ ಶತಮಾನದಲ್ಲಿ ಮುಸ್ಲಿಂ ಹಾಗೂ ಕ್ರಿಶ್ಚಿಯನ್ನರ ಜನಸಂಖ್ಯೆಯು ಹೇರಳವಾಗಿ ಹೆಚ್ಚುತ್ತಿದೆ ಎಂಬ ಸಿದ್ಧಾಂತವನ್ನು ಮಂಡಿಸುತ್ತಾ ಇದು ಮತಾಂತರದಿಂದಲೇ ಆಗಿರುವ, ಆಗುತ್ತಿರುವ ಬೆಳವಣಿಗೆ ಈ ಪ್ರಕ್ರಿಯೆ ಹೀಗೆ ಮುಂದುವರೆದರೆ ಮುಂದೆ ಹಿಂದೂಗಳು ಅಲ್ಪ ಸಂಖ್ಯಾತರಾಗುತ್ತಾರೆ ಎಂದು ವಾದಿಸುತ್ತದೆ.

ಪ್ರಸ್ತುತ ಮತಾಂತರದ ಚರ್ಚೆಯು ಆರಂಭಗೊಂಡಿರುವ ಸನ್ನಿವೇಶವೇ ವಿಚಿತ್ರವಾದದ್ದು. ಇತ್ತೀಚೆಗೆ ಒರಿಸ್ಸಾ ಹಾಗೂ ಕರ್ನಾಟಕ ಹಾಗೂ ಗೋವಾಗಳಲ್ಲಿ ಮತಾಂತರ ನಡೆಯುತ್ತಿದೆ ಮತ್ತು ಹಿಂದೂಗಳನ್ನು ಅವಹೇಳನ ಮಾಡುವಂತಹ ಪುಸ್ತಕಗಳು ಸೃಷ್ಟಿಯಾಗುತ್ತಿವೆ ಎಂದ ಕಾರಣವನ್ನಿಡಿದು ಹಿಂದೂ ಸಂಘಟನೆಗಳು ಚರ್ಚ್‌ಗಳ ಮೇಲೆ ದಾಳಿ ಮಾಡಿದವು. ಚರ್ಚ್‌ಗಳಲ್ಲಿನ ಮೇರಿ ಹಾಗೂ ಏಸುವಿನ ವಿಗ್ರಹಗಳನ್ನು ದ್ವಂಸ ಮಾಡಿದವು. ಈ ಘಟನೆಗಳನ್ನು ಖಂಡಿಸುವ ಪ್ರತಿರೋಧಗಳು ಸಾಮಾಜಿಕ ನ್ಯಾಯದ ಪರಿಕಲ್ಪನೆಯಡಿಯಲ್ಲಿ ರೂಪುಗೊಳ್ಳುತ್ತಿರುವಾಗ ಡಾ॥ ಎಸ್.ಎಲ್.ಭೈರಪ್ಪನವರು 'ವಿಜಯಕರ್ನಾಟಕ' ಪತ್ರಿಕೆಯಲ್ಲಿ ೧೬.೧೦.೨೦೦೮ ರಂದು

ಚರ್ಚ್‌ಗಳ ಮೇಲಿನ ದಾಳಿಯನ್ನು ಸಮರ್ಥಿಸುವಂತೆ ಭಾರತದಲ್ಲಿ ವ್ಯಾಪಕವಾಗಿ ನಡೆಯುತ್ತಿರುವ ಮತಾಂತರ ಪ್ರಕ್ರಿಯೆಯನ್ನು ಕುರಿತು ಲೇಖನ ಪ್ರಕಟಿಸಿದರು. ಅನಂತರ ಈ ಲೇಖನದ ಸುತ್ತ ಪರ ಹಾಗೂ ವಿರೋಧದ ಚರ್ಚೆಗಳು ಮೂವತ್ತೈದು ದಿನಗಳ ಕಾಲ ನಡೆಯಿತು. ಈ ಚರ್ಚೆಯಲ್ಲಿ ಮತಾಂತರದ ಪರ ಹಾಗೂ ವಿರೋಧದ ದ್ವಿಮುಖ ಮಾದರಿಗಳನ್ನು ಸೃಷ್ಟಿಸಿತು.

ಒರಿಸ್ಸಾ ಹಾಗೂ ಕರ್ನಾಟಕದಲ್ಲಿ ಚರ್ಚ್‌ಗಳ ಮೇಲೆ ನಡೆದ ದಾಳಿಗೆ ಪೂರಕವಾಗಿ ಎಸ್.ಎಲ್.ಭೈರಪ್ಪನವರು ವಿಜಯ ಕರ್ನಾಟಕ ಪತ್ರಿಕೆಯಲ್ಲಿ "ನಾಲ್ಕು ಶತಮಾನಗಳಿಂದಲೂ ಸತತವಾಗಿ ಭಾರತದಲ್ಲಿ ನಡೆಯುತ್ತಿರುವ ಕ್ರಿಸ್ತೀಕರಣವು ಸೋನಿಯಾ ಗಾಂಧಿ ಪಟ್ಟಾಭಿಷೇಕವಾದ ನಂತರ ಅಗಾಧ ಪ್ರಮಾಣಕ್ಕೇರಿರುವುದು ಎಲ್ಲರಿಗೂ ಗೊತ್ತಿರುವ ವಿಷಯವಾದರೂ ಯಾವ ಪತ್ರಿಕೆ ಹಾಗೂ ಟಿ.ವಿ.ಯವರು ಹಾಗೆಂದು ಸ್ಪಷ್ಟವಾಗಿ ಬರೆದಿಲ್ಲ. ಹೇಳಿಲ್ಲ. ಆದರೆ ಈ ಅಗಾಧತೆಯಿಂದ ಎಚ್ಚೆತ್ತು ಒರಿಸ್ಸಾ, ಕರ್ನಾಟಕ ಮೊದಲಾದ ಕಡೆ ಅಲ್ಲಲ್ಲಿ ಪ್ರತಿಕ್ರಿಯೆಯಾಗುತ್ತಿರುವುದನ್ನು ಎಲ್ಲಾ ಮಾಧ್ಯಮದವರು ಮುಖ ಪುಟದ ಸುದ್ದಿ ಮಾಡುತ್ತಿರುವುದು ಜಾತ್ಯಾತೀತತೆಯ ಪತ್ರಿಕೆಗಳು ಎಡ ಪಂಥದ ಮಾಧ್ಯಮಗಳು ಭಾರತದ ವಿನಾಶವು ಸಂಭವಿಸುತ್ತಿದೆ ಎಂಬಂತೆ ಹುಯಿಲೆಬ್ಬಿಸಿ ಮಿಶನರಿಗಳಿಗೆ ಸಹಕಾರಿಯಾಗಿ ವರ್ತಿಸುತ್ತಿರುವುದು ಸಾಧಾರಣ ಓದುಗನಿಗೂ ಅರ್ಥವಾಗುತ್ತದೆ. ಈ ಹುಯಿಲನ್ನು ಸೋನಿಯಾಗಾಂಧಿಯ ಅನುಯಾಯಿಗಳು ಬುದ್ಧಿಜೀವಿಗಳು ಜಾತ್ಯಾತೀತರು ತಾರಕಕ್ಕೇರಿಸಿ ಹಿಂದೂಪರ ಸಂಘಟನೆಗಳು, ಮಠಾಧೀಶರು ಮತ್ತು ಬಿ.ಜೆ.ಪಿ. ಸರ್ಕಾರಗಳಿಗೆ ಮಸಿ ಬಳಿಯುವುದು ಮಾತ್ರವಲ್ಲ, ಅಂತರಾಷ್ಟ್ರೀಯ ಮಟ್ಟದಲ್ಲಿ ವಿಶ್ವಸಂಸ್ಥೆ ಮಟ್ಟದಲ್ಲಿ ಭಾರತಕ್ಕೆ ಛೀಮಾರಿ ಹಾಕಿಸಲು ವಿದ್ಯುಕ್ತವಾಗಿರುವ ಕ್ರೈಸ್ತ ಸಂಘಟನೆಗಳಿಗೆ ನೆರವಾಗುತ್ತಿರುವುದು ಸ್ಪಷ್ಟವಾಗಿದೆ". ಎಂದು ಬರೆಯುತ್ತಾರೆ. ಈ ಮಾತುಗಳಲ್ಲಿ ಪ್ರಸ್ತುತ ಸಾಮಾಜಿಕ, ರಾಜಕೀಯ ಹಾಗೂ ಹಿಂದೂ ಧರ್ಮದ ಸ್ಥಿತಿಗಳು ಅನ್ಯಧರ್ಮೀಯರಿಂದ ಅಸ್ಥಿರಗೊಂಡಿವೆಯೆಂದು ಭೈರಪ್ಪನವರು ವಾದಿಸುತ್ತಾರೆ. ಈ ಲೇಖನದಲ್ಲಿ ಅವರು ಮತಾಂತರಿಗಳನ್ನಷ್ಟೇ ಅಲ್ಲದೆ ಭಾರತದಲ್ಲಿ ಜಾತ್ಯಾತೀತತೆ, ಎಡಪಂಥೀಯತೆ, ಪ್ರಗತಿ ಪರತೆಗಳು ಕ್ರಿಶ್ಚಿಯನ್ ಮಿಷನರಿಗಳ ಪರವಾಗಿವೆಯೆಂದು ಹೇಳುತ್ತಾರೆ. ಮೇಲಿನ ಪರಿಕಲ್ಪನೆಗಳನ್ನು ವಿರೋಧಿಸುವ ಮೂಲಕ ಭಾರತಕ್ಕೆ ಇವುಗಳ ಅಗತ್ಯವೇ ಇಲ್ಲವೆನ್ನುವ ತೀರ್ಮಾನಕ್ಕೆ ಬರುತ್ತಾರೆ. ಈ ಪರಿಕಲ್ಪನೆಗಳಿಗೆ ಪರ್ಯಾಯವಾಗಿ

ಇವರು ಹಿಂದೂ ಸಂಘಟನೆಗಳನ್ನು ಸೂಚಿಸುತ್ತಾರೆ. ಈ ಲೇಖನಕ್ಕೆ ಪೂರಕವಾಗಿ ಬಂದ ಪ್ರತಿಕ್ರಿಯೆಗಳೂ ಕೂಡ ಇದೇ ಮಾದರಿಯ ಮುಂದುವರೆದ ಭಾಗಗಳಾಗಿವೆ.

ಈ ಚಿಂತನೆಗಳಿಗೆ ಪ್ರತಿರೋಧವಾಗಿ ಹುಟ್ಟಿಕೊಂಡ ಪ್ರತಿಕ್ರಿಯೆಗಳು ಭಾರತೀಯ ಸಮಾಜದೊಳಗಿನ ಕೋಮುವಾದವು ಸಮುದಾಯಗಳನ್ನು ಛಿದ್ರೀಕರಣ ಗೊಳಿಸುತ್ತಿದೆಯೆಂದು ಆರೋಪಿಸುತ್ತಾ ಬೈರಪ್ಪನವರನ್ನು ವಿರೋಧಿಸುತ್ತಾರೆ. ಈ ಕೋಮುವಾದದಿಂದ ಇಲ್ಲಿನ ಅಲ್ಪಸಂಖ್ಯಾತ ಸಮುದಾಯಗಳು ಭೀತಿಯಲ್ಲಿ ನರಳುವಂತಾಗಿದೆ. ಅವುಗಳಿಗೆ ಧೈರ್ಯ ತುಂಬುವ ಕೆಲಸ ಪ್ರಜ್ಞಾವಂತರೆಲ್ಲರ ಜವಾಬ್ದಾರಿಯೆಂದು ಈ ಚಿಂತನೆ ವಾದಿಸುತ್ತದೆ. ಅಲ್ಲದೆ ಮತಾಂತರವೆಂಬುದು ಕೋಮುವಾದಿಗಳು ಸೃಷ್ಟಿಸಿರುವ ಕಲ್ಪಿತ ಸಮಸ್ಯೆಯೆಂದು ಈ ಚಿಂತನೆ ನಂಬುತ್ತದೆ. ಬೈರಪ್ಪನವರ ವಾದಕ್ಕೆ ಪ್ರತಿಕ್ರಿಯಾತ್ಮಕವಾಗಿ ಹಿಂದೂ ಧರ್ಮದಲ್ಲಿರುವ ಅಸ್ಪೃಶ್ಯತೆ, ಲಿಂಗತಾರತಮ್ಯ ಮುಂತಾದ ಏಣಿಶ್ರೇಣೀಕರಣ ವ್ಯವಸ್ಥೆಯನ್ನು ವಿರೋಧಿಸುತ್ತಾ ಇತಿಹಾಸದಲ್ಲಿ ನಡೆದಿರುವ ಆರ್ಯೀಕರಣವನ್ನು ಎತ್ತಿಹಿಡಿಯುತ್ತದೆ. ಈ ಚಿಂತನೆಯ ಪ್ರಸ್ತುತ ಜಾಗತೀಕರಣದಂತಹ ಬಂಡವಾಳಗಳೊಂದಿಗೆ ಕೋಮುವಾದ ಸೃಷ್ಟಿಸುತ್ತಿರುವ ಸಾಮಾಜಿಕ ಛಿದ್ರೀಕರಣದ ತಲ್ಲಣಗಳನ್ನು ಒಂದೇ ನಾಣ್ಯದ ಎರಡು ಮುಖಗಳೆಂದು ನೋಡುತ್ತಾ ಇಂದು ಈ ಶಕ್ತಿಗಳ ವಿರುದ್ಧ ಸಮುದಾಯಗಳನ್ನು ಬಲಪಡಿಸುವ ಆಶಯವನ್ನು ವ್ಯಕ್ತಪಡಿಸುತ್ತದೆ. ಅದಕ್ಕಾಗಿ ಇಂದು ಕುಲಮೂಲೀಯ ಚಿಂತನೆಯೆಂಬ ಡಿಸ್ಕೋರ್ಸ್ ಹುಟ್ಟಿರುವುದನ್ನು ಗಮನಿಸಬಹುದು. ಈ ಸಂಕಥನವು ಸಮುದಾಯಗಳ ಮೂಲ ನೆಲೆಯನ್ನು ಶೋಧಿಸುತ್ತಾ ಹಿಂದೂ ಧರ್ಮದ ಚಾರಿತ್ರಿಕ ದೌರ್ಜನ್ಯಗಳಿಂದ ಬಿಡುಗಡೆಗೊಳ್ಳುವ ಹಾಗೂ ಇದೇ ವೇಳೆಗೆ ಜಾಗತೀಕರಣದ ವಿರುದ್ಧ ಸ್ಥಳೀಯ ಸಂಸ್ಕೃತಿಗಳನ್ನು ಎತ್ತಿ ಹಿಡಿಯುವ ಕೆಲಸ ಮಾಡುತ್ತದೆ.

**ಕೋಮುವಾದದ ಸ್ವರೂಪ :**

ಇದು ಭಾರತದಲ್ಲಿ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿಯೇ ರೂಪುಗೊಂಡ ಹಿಂದೂ ಮತೀಯವಾದಿ ಸಂಘಟನೆ ಇಂದಿಗೂ ಜೀವಂತವಾಗಿರುವ ಹಾಗೂ ವಿಸ್ತೃತಗೊಳ್ಳುತ್ತಿರುವ ಧಾರ್ಮಿಕ ಚಳುವಳಿ. ಇದು ಚರಿತ್ರೆಯುದ್ದಕ್ಕೂ ಭಾರತವನ್ನು ಹಿಂದೂ ರಾಷ್ಟ್ರವೆಂದು ಅರ್ಥೈಸುತ್ತಾ ಬಂದಿರುವಂಥದ್ದು. ಹೀಗೆ ಅರ್ಥೈಸುವ ಕಾರಣಕ್ಕೆ ತಾನು ಮತ್ತು ಅನ್ಯ ಅಥವಾ ಬಹುಸಂಖ್ಯಾತ ಮತ್ತು

ಅಲ್ಪಸಂಖ್ಯಾತ ಎಂಬ ಪರಿಭಾಷೆಗಳನ್ನು ಸೃಷ್ಟಿಸುತ್ತಾ, ಹಿಂದೂಗಳನ್ನು ಬಹುಸಂಖ್ಯಾತವೆಂತಲೂ, ಮುಸ್ಲಿಂ ಹಾಗೂ ಕ್ರಿಶ್ಚಿಯನ್ನರನ್ನು ಅಲ್ಪಸಂಖ್ಯಾತವೆಂತಲೂ ಆರೋಪ ಮಾಡುತ್ತಾ ಬರುತ್ತಿರುವುದಾಗಿದೆ. ಇದು ಹೀಗೆ ಅರ್ಥೈಸುವಾಗಲೇ ತಾನು ಅಥವಾ ಬಹುಸಂಖ್ಯಾತರಾಗಿರುವ ಹಿಂದೂ ಧರ್ಮೀಯ ಭಾರತೀಯ, ಇನ್ನುಳಿದ ಅಲ್ಪ ಸಂಖ್ಯಾತ ಅಥವಾ ಅನ್ಯ ಧರ್ಮೀಯರು ವಿದೇಶಿಯರು ಎಂಬ ಪರಿಕಲ್ಪನೆಗಳನ್ನು ಇಂದಿಗೂ ಸೃಷ್ಟಿಸುತ್ತಾ ಬಂದಿದೆ. ಇದೇ ಪರಿಭಾಷೆ ಇಂದಿನ ಮತಾಂತರ ಚರ್ಚೆಯನ್ನು ರೂಪಿಸುತ್ತದೆ.

ಕೋಮುವಾದವು ಅಧಾರ್ಮಿಕ ಸಂಕೇತಗಳು, ಘಟನೆಗಳನ್ನು ಧಾರ್ಮಿಕಗೊಳಿಸುವ ಕೆಲಸ ಮಾಡುತ್ತದೆ. ತನ್ನ ಅಖಂಡ ಹಿಂದೂ ರಾಷ್ಟ್ರ ಸ್ಥಾಪನೆಗೆ ತನಗೆ ರಾಜಕೀಯಾಧಿಕಾರ ಸಿಗಬೇಕೆಂಬ ಕಾರಣಕ್ಕಾಗಿ ಧಾರ್ಮಿಕಗೊಳಿಸಿದ ವಿಷಯಗಳನ್ನು ರಾಜಕೀಯ ಉದ್ದೇಶಗಳಿಗಾಗಿ ಬಳಸುತ್ತದೆ. ತನ್ನ ಉದ್ದೇಶ ಈಡೇರಿಕೆಗಾಗಿ ಸಾಮಾಜಿಕ ಭಾವೋದ್ರೇಕಗಳನ್ನು ರೂಪಿಸುತ್ತಾ ಅದರ ಲಾಭಗಳನ್ನು ಪಡೆದುಕೊಳ್ಳಲು ಯತ್ನಿಸುತ್ತದೆ. ಇದು ಚರಿತ್ರೆಯುದ್ದಕ್ಕೂ ತಿರುಚಿ ಬಳಸಿದ ವಿಷಯಗಳಲ್ಲಿ ಬಾಲಗಂಗಾಧರ ತಿಲಕರ ಗಣೇಶೋತ್ಸವ, ಗಾಂಧಿಯವರ ಸ್ವದೇಶಿ ಕಲ್ಪನೆ, ರಾಮಜನ್ಮಭೂಮಿಯ ವಿವಾದ ಹಾಗೂ ಗೋದ್ರಾ ಹತ್ಯಾಕಾಂಡಗಳು ಪ್ರಮುಖವಾದವು. ಬಾಲಗಂಗಾಧರ ತಿಲಕರು ರಾಷ್ಟ್ರೀಯತೆಯ, ಒಗ್ಗಟ್ಟಾದ ಭಾವನೆಗಳನ್ನು ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಮೂಡಿಸುವ ಸಲುವಾಗಿ ಅಧಾರ್ಮಿಕವಾದ ಗಣೇಶೋತ್ಸವಗಳನ್ನು ರೂಪಿಸಿದರು. ಕೋಮುವಾದವು ಇಂದು ಈ ಸಂಕೇತವನ್ನು ಹಿಂದೂ-ಮುಸ್ಲಿಂ ಸಮುದಾಯಗಳನ್ನು ಒಡೆಯಲು ಬಳಸುತ್ತಿರುವುದನ್ನು ಕಾಣಬಹುದು. ಹಾಗೆಯೇ ಗಾಂಧೀಜಿಯವರ ಸ್ವದೇಶಿ ಕಲ್ಪನೆಯನ್ನು ಇಂದು ಕೋಮುವಾದಿಗಳು ಸಂಪೂರ್ಣವಾಗಿ ತಿರುಚಿ ಹಿಂದೂ ಮತೀಯವಾದಿ ಪರಿಭಾಷೆಯಲ್ಲಿ ವಿವರಿಸುವುದನ್ನು ಕಾಣಬಹುದಾಗಿದೆ. ಇವುಗಳಂತೆ ಬಾಬ್ರಿಮಸೀದಿ ಧ್ವಂಸ ಹಾಗೂ ಗೋದ್ರಾ ಹತ್ಯಾಕಾಂಡಗಳನ್ನು ಕೋಮುವಾದವು ಹಿಂದೂ ಧಾರ್ಮಿಕ ರಾಷ್ಟ್ರದ ಸ್ಥಾಪನೆಗಾಗಿ ಬಳಸುತ್ತಾ ಬಂದಿರುವುದನ್ನು ಕಾಣಬಹುದು. ಪ್ರಸ್ತುತ ಮತಾಂತರ ಪ್ರಕ್ರಿಯೆಗೆ ಸ್ಪಂದಿಸುತ್ತಿರುವ ರಾಜಕಾರಣವನ್ನು ಈ ಹಿನ್ನಲೆಯ ಅರ್ಥಮಾಡಿಕೊಳ್ಳಬಹುದೆನಿಸುತ್ತದೆ.

ವಸಾಹತುಶಾಹಿಯ ಸಂದರ್ಭದಲ್ಲಿನ ಮತಾಂತರ ಪ್ರಕ್ರಿಯೆಗಳಿಗೆ ನವೋದಯ ಸಾಹಿತ್ಯವು ಪ್ರತಿಕ್ರಿಯಿಸಿದ ಸ್ವರೂಪವನ್ನು ಗಮನಿಸಿದಾಗ ಅದನ್ನೂ ವಸಾಹತುಶಾಹಿಯ ತಂತ್ರಗಾರಿಕೆಯಾಗಿ ಪರಿಭಾವಿಸಿ ಅದನ್ನೂ ವಿರೋಧಿಸುತ್ತದೆ. ಇದರ ಜೊತೆಗೆ ಭಾರತೀಯ ಸಾಮಾಜಿಕ ಅಸಮಾನತೆಗಳನ್ನು ಅದು ಪ್ರಶ್ನಿಸುತ್ತದೆ. ಈ ಹಿನ್ನೆಲೆಯಲ್ಲಿ ವರ್ತಮಾನದ ಸಾಹಿತ್ಯಿಕ ವಾಗ್ವಾದಗಳು ಹಾಗೂ ಸಾಮಾಜಿಕ ವಿದ್ಯಮಾನಗಳು ಮತಾಂತರ ಪ್ರಕ್ರಿಯೆಯನ್ನು ನೋಡುತ್ತಿರುವ ಬಗೆಯನ್ನು ಚರ್ಚಿಸಬಹುದೆನಿಸುತ್ತದೆ.

### ೧. **ಸಾಹಿತ್ಯಿಕ ವಾಗ್ವಾದಗಳು :**

ವರ್ತಮಾನದ ಮತಾಂತರ ಚರ್ಚೆಗೆ ಸಾಹಿತ್ಯ ವಲಯದ ಪ್ರತಿಸ್ಪಂದನಗಳನ್ನು ದಾಖಲಿಸುವುದು ಈ ಭಾಗದ ಪ್ರಮುಖ ಉದ್ದೇಶವಾಗಿದೆ. ವಸಾಹತುಶಾಹಿಯ ಸಂದರ್ಭದಲ್ಲಿನ ಮತಾಂತರ ಪ್ರಕ್ರಿಯೆಗಳಿಗೆ ನವೋದಯ ಸಾಹಿತ್ಯವು ಹೇಗೆ ಪ್ರತಿಸ್ಪಂಖದಿಸಿದೆ ಎಂದು ಹಿಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ. ಅಲ್ಲಿ ವಸಾಹತುಶಾಹಿ ವರ್ತಮಾನ ವ್ಯವಸ್ಥೆಯ ತಂತ್ರಗಾರಿಕೆಯಾಗಿ ಮತಾಂತರವನ್ನು ಅರ್ಥೈಸಿಕೊಂಡು ಪ್ರತಿಕ್ರಿಯಿಸಿತು. ಕ್ರಿಶ್ಚಿಯಾನಿಟಿಗೆ ಪರ್ಯಾಯವಾಗಿ ಭಾರತೀಯ ಧಾರ್ಮಿಕ ಪರಂಪರೆಯೊಂದನ್ನು ಮರುಸ್ಥಾಪಿಸುವ ಚಲನಶೀಲ ನಡಾವಳಿಗಳನ್ನು ನವೋದಯ ಸಾಹಿತ್ಯ ತೋರಿದೆ. ಅದು ಎಲ್ಲಿಯೂ ಮುಗ್ಧವಾಗಿ ಹಿಂದೂ ಪರಂಪರೆಯನ್ನು ಎತ್ತಿ ಹಿಡಿಯುವುದಿಲ್ಲ. ಅದು ಏಕಕಾಲಕ್ಕೆ ಮನ್ವೇಲನನ್ನು ಹಾಗೂ ಸಂಕಪಯ್ಯನನ್ನು ಅಪರಾಧಿಗಳ ಸ್ಥಾನದಲ್ಲಿಯೇ ನಿಲ್ಲಿಸುತ್ತವೆ. ಇವರಿಬ್ಬರ ಜೊತೆಗೂ ಮುಖಾಮುಖಿ ನಡೆಸಿ ಸ್ವಚ್ಛಂದವಾದ ಧಾರ್ಮಿಕ ಪರಿಸರವೊಂದು ರೂಪುಗೊಳ್ಳಬೇಕಾದ ಆಶಯಗಳನ್ನು ವ್ಯಕ್ತಪಡಿಸುತ್ತದೆ. ಅದು ಮತಾಂತರಕ್ಕೆ ಭಾರತದಲ್ಲಿರುವ ಚಾರಿತ್ರಿಕ ಆಯಾಮವನ್ನು ಗ್ರಹಿಸುವುದಿಲ್ಲವಾದರೂ ವರ್ತಮಾನದ ಅದರ ಎಲ್ಲ ನೆಲೆಗಳನ್ನು ಶೋಧಿಸುತ್ತದೆ. ನವೋದಯ ಸಾಹಿತ್ಯವು ಮತಾಂತರವನ್ನು ವಿರೋಧಿಸುವ ಐತಿಹಾಸಿಕ ಕಾರಣಗಳು ಹಾಗೂ ಒತ್ತಡಗಳ ಸ್ವರೂಪಗಳು ಬೇರೆ ಬಗೆಯವಾದರೂ ಅದು ಎಲ್ಲಿಯೂ ಸಾಮಾಜಿಕ ಸಂಘರ್ಷಗಳನ್ನು ಸೃಷ್ಟಿಸಿಲ್ಲ ಎಂಬುದನ್ನು ಗಮನಿಸಬೇಕು. ಯಾಕೆಂದರೆ ಯಾವುದೇ ಕೃತಿಯು ಸಮಾಜದ ಚಲನ ವಲನಗಳಿಗೆ ಸ್ಪಂದಿಸುವಾಗ ಕೃತಿಯಿಂದ ಉಂಟಾಗುವ ಸಾಮಾಜಿಕ ಪರಿಣಾಮಗಳ ಬಗ್ಗೆ ಎಚ್ಚರ ವಹಿಸಬೇಕಾಗುತ್ತದೆ. ಕೃತಿಯೊಂದು ಸಮಾಜದ ವಾಸ್ತವಗಳ ಎಲ್ಲ ನೆಲೆಗಳನ್ನು ಶೋಧಿಸುತ್ತಾ ಸಾಗಿದಾಗ ಕೃತಿಯಿಂದ ಸಂಭವಿಸಬಹುದಾದ

ಅಪಾಯಗಳು ಇಲ್ಲವಾಗುತ್ತವೆ. ಹೀಗಾಗಿ ನವೋದಯ ಸಾಹಿತ್ಯವು ತನ್ನ ಕಾಲಘಟ್ಟದ ಎಲ್ಲ ಪಿಡುಗುಗಳನ್ನು ಸಮಾನ ದೂರದಲ್ಲಿ ನಿಂತು ನೋಡುತ್ತದೆ. ಹಾಗಾಗಿಯೇ ಮತಾಂತರಕ್ಕೆ ಸಂಬಂಧಿಸಿದಂತೆ ಸಾಮಾಜಿಕ ಸಂಘರ್ಷಗಳನ್ನು ಸೃಷ್ಟಿಸಿಲ್ಲ.

ವರ್ತಮಾನದಲ್ಲಿನ ಮತಾಂತರ ಪ್ರಕ್ರಿಯೆಗೆ ಸಾಹಿತ್ಯ ವಲಯ ಹೇಗೆ ಸ್ಪಂದಿಸಿದೆ ಎಂಬುದನ್ನು ಚರ್ಚಿಸಲು ಎರಡು ಮುಖ್ಯ ಕಾದಂಬರಿಗಳನ್ನು ಬಳಸಿಕೊಳ್ಳಬಹುದಾಗಿದೆ. ಒಂದು : ಡಾ॥ ಎಸ್.ಎಲ್.ಭೈರಪ್ಪನವರ 'ಆವರಣ' ಕಾದಂಬರಿ. ಎರಡು : ದೇವನೂರು ಮಹಾದೇವರ 'ಕುಸುಮಬಾಲೆ' ಕಾದಂಬರಿ. ಈ ಎರಡೂ ಕಾದಂಬರಿಗಳಿಗಿರುವ ಆತಂಕ ಕೇಂದ್ರಗಳು ಬೇರೆ ಬಗೆಯವು. ಭೈರಪ್ಪನವರ ಆವರಣದ ಆತಂಕ ಧಾರ್ಮಿಕವಾದದ್ದಾರೆ. 'ದೇವನೂರು ಮಹಾದೇವರ ಕುಸುಮಬಾಲೆ ಆತಂಕ ಜಾತಿ ಮೂಲದ್ದು. ಪ್ರಸ್ತುತ ಮತಾಂತರದ ಚರ್ಚೆಯು ಈ ಎರಡೂ ಕೇಂದ್ರಗಳಿಂದ ಹೊರಡುತ್ತದೆ. ಹಾಗಾಗಿ ಈ ಎರಡೂ ಕಾದಂಬರಿಗಳು ಮತಾಂತರವನ್ನು ಹೇಗೆ ಸ್ವೀಕರಿಸುತ್ತವೆ ಎಂದ ಚರ್ಚೆಯು ಮುಖ್ಯವಾದದ್ದೆನಿಸುತ್ತದೆ.

ಆವರಣ ಕಾದಂಬರಿಯ ವಸ್ತು ನೇರವಾಗಿ ಮತಾಂತರಕ್ಕೆ ಸಂಬಂಧಿಸಿದ್ದು, ಈ ಕೇಂದ್ರದ ಸುತ್ತ ಇದಕ್ಕೆ ಪೂರಕ ನೆಲೆಗಳನ್ನು ಇದು ಶೋಧಿಸುತ್ತದೆ. ನರಸಾಪುರದ ನರಸಿಂಹಪ್ಪನ ಮಗ ಲಕ್ಷ್ಮಿ ಪುಣೆಯ ಫಿಲ್ಮ್ ಇನ್ಸ್‌ಟಿಟ್ಯೂಟಿನ ತನ್ನ ಸಹಪಾಠಿ ಅಮೀರನನ್ನು ಮದುವೆಯಾಗಿ ಅನಂತರ ಅವಳ ದಾಂಪತ್ಯ ಜೀವನ ಬಿರುಕು ಬಿಟ್ಟು ತನ್ನ ಮೂಲಧರ್ಮಕ್ಕೆ ವಾಪಸಾಗುತ್ತಾಳೆ. ಅನಂತರ ಇವಳು ತನ್ನ ಮೊದಲಿನ ಪ್ರಗತಿಪರ ಧೋರಣೆಗಳನ್ನು, ತನ್ನ ಸುತ್ತಲಿದ್ದ ಪ್ರಗತಿ ಪರರನ್ನು, ಉಪಪಂಥೀಯರನ್ನು ಶಾಸ್ತ್ರಿ ಎಂಬ ತನ್ನದೇ ಊರಿನ ಬುದ್ಧಿಜೀವಿಯ ನಯಗಾರಿಕೆಯನ್ನು ಮುಸ್ಲಿಂ ಧರ್ಮದ ದಬ್ಬಾಳಿಕೆಗಳನ್ನು ವಿರೋಧಿಸುತ್ತಾಳೆ. ಈ ವಿರೋಧಿಸುವ ಭಾಷೆ ವಿಚಿತ್ರವಾದದ್ದು. ಮತಾಂತರ ಚರ್ಚೆಯನ್ನು ಆರಂಭಿಸಿದ ಭೈರಪ್ಪನವರ ವೈಚಾರಿಕ ಬರಹದ ಭಾಷೆಗೂ, ಆವರಣ ಕಾದಂಬರಿಯ ಭಾಷೆಗೂ ವ್ಯತ್ಯಾಸಗಳೇ ಕಂಡುಬರುವುದಿಲ್ಲ. ಲಕ್ಷ್ಮಿ ಇಡೀ ಕಾದಂಬರಿಯುದ್ದಕ್ಕೂ ಹಿಂದು ಧರ್ಮ ಚರಿತ್ರೆ ಹಾಗೂ ವರ್ತಮಾನಗಳಲ್ಲಿ ಎಷ್ಟೆಲ್ಲಾ ಆಕ್ರಮಣಗಳಿಗೆ ತುತ್ತಾಗಿದೆ ಎಂಬ ಆತಂಕ ಕೇಂದ್ರಿತ ಉದ್ರೇಕದಲ್ಲಿ ವರ್ತಿಸುತ್ತಾಳೆ. ಕಾದಂಬರಿಯ ಆರಂಭದಲ್ಲಿಯೇ ಅವಳ

ಮನಸ್ಸು ಅಸಹಜತೆಯಿಂದ ಕೂಡಿರುವುದಾಗಿದೆ. ಇಡೀ ಕಾದಂಬರಿಯಲ್ಲಿ ಲಕ್ಷ್ಮಿಯ ಪಾತ್ರ ಇದೇ ಗುಣದಲ್ಲಿರುತ್ತದೆ.

ಉದ್ರೇಕದಿಂದ ಕೂಡಿದ ಕಲ್ಪಿತ ಆತಂಕದಲ್ಲಿರುವ ಲಕ್ಷ್ಮಿ ತನ್ನ ಅಪ್ಪನ ಇತಿಹಾಸ ಸಂಶೋಧನೆಯ ಆಧಾರದ ಮೇಲೆ ಕಾದಂಬರಿಯೊಂದನ್ನು ಬರೆಯುತ್ತಾಳೆ. ಆ ಕಾದಂಬರಿ ಔರಂಗಜೇಬನ ಕಾಲದ್ದು. ಇದರಲ್ಲಿ ದೇವಗಡ ಎಂಬ ಸಣ್ಣ ಸಾಮ್ರಾಜ್ಯದ ಯುವರಾಜ ಔರಂಗಜೇಬನ ಸೈನ್ಯರ ದಾಳಿಗೆ ಸಿಕ್ಕಿ ಶರಣಾಗಿ ಇಸ್ಲಾಂ ಧರ್ಮಕ್ಕೆ ಬಲವಂತವಾಗಿ ಮತಾಂತರಗೊಳ್ಳುತ್ತಾನೆ. ಆನಂತರ ಇವನು ಗುಲಾಮನಾಗಿ, ಸೇನಾಧಿಕಾರಿಗಳ ಸಲಿಂಗ ಕಾಮಕ್ಕೆ ಗುರಿಯಾಗಿ ಹಿಜಡಾ ಆಗಿ ಕೊನೆಗೆ ಅಲ್ಲಿಂದ ಬಿಡಿಸಿಕೊಂಡು ಬಂದು ಔರಂಗಜೇಬನ ವಿರುದ್ಧ ಹೋರಾಡುವ ಸಂಕಲ್ಪ ತೊಡುತ್ತಾನೆ.

ಆವರಣದ ಈ ಕಥಾಹಂದರ ಮಧ್ಯಕಾಲೀನ ಸಂದರ್ಭದಲ್ಲನ ಮುಸ್ಲಿಂ ದಾಳಿಗಳ ಕ್ರೌರ್ಯವನ್ನು ದಾಖಲಿಸುತ್ತಾ ವರ್ತಮಾನದಲ್ಲಿ ಇಸ್ಲಾಂ ಧರ್ಮವನ್ನು ಪರಿವರ್ತಿಸುವ ಮನೋಧರ್ಮವನ್ನು ತೋರುತ್ತದೆ. ಕಾದಂಬರಿಯ ಅಂತ್ಯದಲ್ಲಿ ಅಮೀರ ಲಕ್ಷ್ಮಿಯ ನೆರವಿಗೆ ಬರುವುದರ ಮೂಲಕ ಈ ಮನೋಧರ್ಮ ವ್ಯಕ್ತವಾಗುತ್ತದೆ. ಆದರೆ ಕಾದಂಬರಿಯ ಆಂತರ್ಯ ವರ್ತಮಾನದಲ್ಲಿ ಮುಸ್ಲಿಮರ ಮೇಲೆ ದ್ವೇಷ ತೀರಿಸಿಕೊಳ್ಳುವ ಆಶಯವನ್ನು ಅಭಿವ್ಯಕ್ತಿಸುತ್ತದೆ. ಮತಾಂತರದ ವಿರುದ್ಧ ತೀವ್ರ ಪ್ರತಿರೋಧವನ್ನು ಒಡ್ಡುತ್ತದೆ. ಆವರಣದಲ್ಲಿ ಉದ್ದಕ್ಕೂ ಹಿಂದೂ ಧರ್ಮದ ಉದಾತ್ತ ಗುಣಗಳನ್ನು ಎತ್ತಿ ಹಿಡಿಯುತ್ತಾ ಹೋಗುತ್ತೆ. ಎಲ್ಲಿಯೂ ಅದು ತನ್ನ ಧರ್ಮದೊಳಗಿನ ಅಸಮಾನತೆಗಳ ವಿರುದ್ಧ ಮಾತಾಡುವುದುದೇ ಇಲ್ಲ. ಬದಲಾಗಿ ಇಂದಿಗೂ ಬದಲಾಗದ ಏಣಿಶ್ರೇಣಿ ವ್ಯವಸ್ಥೆಯನ್ನು ಸಮರ್ಥಿಸುತ್ತಾ ಸಾಗುತ್ತದೆ. ಸಾಂಪ್ರದಾಯಿಕ ಮೌಢ್ಯಗಳನ್ನು ಸಾಂಸ್ಕೃತಿಕ ವೈಶಿಷ್ಟ್ಯವೆಂದು ಪ್ರತಿಪಾದಿಸುತ್ತದೆ. ಆವರಣವು ಎಲ್ಲ ನೆಲೆಗಳಲ್ಲಿಯೂ ಏಕಮುಖಿಯಾಗಿ ಸಾಗುತ್ತಾ ಮತೀಯವಾದಿಗಳಿಗೆ ಒಂದು ಆಕರವಾಗಿ ರೂಪುಗೊಳ್ಳುತ್ತದೆ. ನವೋದಯ ಕಾಲಘಟ್ಟದಲ್ಲಿ ಬರೆದ ಲೇಖಕರಲ್ಲಿ ಬಹುತೇಕರು ಸಂಪ್ರದಾಯಶೀಲರೇ ಆದರೂ ಅವರು ತಮ್ಮ ಕೃತಿಗಳಲ್ಲಿ ಆವರಣದಂತೆ ಏಕಮುಖೀ ನಿಲುವುಗಳನ್ನು ತಳೆಯುವುದಿಲ್ಲ. ನವೋದಯದ ಸಂದರ್ಭದಲ್ಲಿ ಸಂಪ್ರದಾಯಶೀಲ ಮನೋಧರ್ಮವು ಉದಾರ ಮಾನವತಾವಾದ ಪರಿಕಲ್ಪನೆಯನ್ನು ಪ್ರಕಟಿಸುತ್ತಾ ತನ್ನ ಧರ್ಮದೊಳಗೆ ಇರುವ ಅಸಮಾನತೆ,

ಮೌಢ್ಯಗಳ ವಿರುದ್ಧ ಪ್ರತಿಭಟಿಸುವ ಮನೋಧರ್ಮವನ್ನು ತಾಳುತ್ತದೆ. ಈ ಮನೋಧರ್ಮವನ್ನು ಭೈರಪ್ಪನವರು ಆವರಣದಲ್ಲಿ ತಾಳುವುದೇ ಇಲ್ಲ. ಈ ಕಾದಂಬರಿಯು ಪ್ರಸ್ತುತ ಮತಾಂತರದ ಸಂಘರ್ಷಗಳಿಗೆ ಪೂರಕವಾಗಿ ಕಾರ್ಯನಿರ್ವಹಿಸುತ್ತದೆ. ಈ ಕಾದಂಬರಿಯು ಮತೀಯವಾದಿ ಮನಸ್ಸೊಂದು ಸಾಹಿತ್ಯ ನಿರ್ಮಿತಿಯಲ್ಲಿ ತೊಡಗಿ ಸಾಹಿತ್ಯದ ಸತ್ವವನ್ನೇ ನಾಶ ಮಾಡುವ ಸಂಕೇತದಂತೆ ಕಾಣುತ್ತದೆ.

ಆವರಣ ಕಾದಂಬರಿಯು ಹಿಂದೂ ಧರ್ಮ ಚಾರಿತ್ರಿಕವಾಗಿ ಅನ್ಯಧರ್ಮಗಳ ದಾಳಿಗೆ ಸಿಕ್ಕಿ ನಲುಗಿರುವ ಹಾಗೂ ವರ್ತಮಾನದಲ್ಲಿ ತನ್ನದೇ ಧರ್ಮದ ಬುದ್ಧಿಜೀವಿಗಳು, ಜಾತ್ಯಾತೀತರು ಪ್ರಗತಿ ಪರರಿಂದ ನಲುಗುತ್ತಿರುವ ಕೇಂದ್ರಗಳನ್ನು ಶೋಧಿಸುತ್ತದೆ. ಈ ಕಾದಂಬರಿಯ ಕೇಂದ್ರಕ್ಕೆ ವಿರುದ್ಧವಾದ ನೆಲೆಗಳಲ್ಲಿ ದೇವನೂರು ಮಹಾದೇವರ 'ಕುಸುಮಬಾಲೆ' ಕಾದಂಬರಿಯು ಹಿಂದೂ ಧರ್ಮದೊಳಗಿರುವ ಜಾತಿ ಅಸಮಾನತೆಯ ಕ್ರೌರ್ಯಗಳನ್ನು ಶೋಧಿಸುತ್ತದೆ. ಕಾದಂಬರಿಯಲ್ಲಿ ದಲಿತ ಜಾತಿಗೆ ಸೇರಿದ ಚೆನ್ನ ಲಿಂಗಾಯಿತ ಜಾತಿಯ ಕುಸುಮಳನ್ನು ಪ್ರೇಮಿಸಿದ್ದಕ್ಕೆ ಕೊಲೆಯಾಗುತ್ತಾನೆ. ಹಿಂದೂ ಧರ್ಮ ದಲಿತರನ್ನು ತನ್ನ ಧಾರ್ಮಿಕ ಪರಿಧಿಯಿಂದ ಆಚೆ ಇಟ್ಟಿರುವ ಚರಿತ್ರೆಯುದ್ದಕ್ಕೂ ತನ್ನ ಮೇಲೆ ಆಕ್ರಮಣಗಳನ್ನು ಮಾಡಿಕೊಂಡೇ ಬಂದಿರುವ ಕ್ರೌರ್ಯಗಳನ್ನು ಕಾದಂಬರಿ ವಿಡಂಬಿಸುತ್ತದೆ. ಹಿಂದೂ ಧರ್ಮದಲ್ಲಿರುವ ಇಂತಹ ಅಮಾನವೀಯ ಆಚರಣೆಗಳ ಪರಿಧಿಯಿಂದ ಬಿಡುಗಡೆಗೊಳ್ಳುವ ಅಗತ್ಯವನ್ನು ಒತ್ತಿ ಹೇಳುತ್ತದೆ. ಈ ಕಾದಂಬರಿಯು ನೇರವಾಗಿ ಮತಾಂತರಕ್ಕೆ ಸಂಬಂಧಿಸಿದ್ದಲ್ಲವಾದರೂ ಹಿಂದೂ ಧರ್ಮದಲ್ಲಿನ ಸಾಮಾಜಿಕ ಅಸಮಾನತೆಗಳಿಂದಾಗಿ ಇಲ್ಲಿಂದ ಬಿಡುಗಡೆಗೊಳ್ಳುವ ಒತ್ತಾಯವನ್ನು ರೂಪಿಸುತ್ತದೆ. ನವೋದಯ ಕಾದಂಬರಿಗಳಂತೆ ಸುಧಾರಣಾವಾದಿ ನೆಲೆಯನ್ನು ಇದು ಒಪ್ಪುವುದಿಲ್ಲ. ಕಾದಂಬರಿಕಾರರಿಗೆ ಹಳ್ಳಿಗಳು ಸಾಂಸ್ಕೃತಿಕ ಶ್ರೀಮಂತಿಕೆ ಹೊತ್ತಂತೆ ಕಂಡರೆ, ಈ ಕಾದಂಬರಿಯು ತನ್ನ ಪಾಲಿಗೆ ಹಳ್ಳಿಯ ಪರಿಸರ ಕ್ರೌರ್ಯಗಳನ್ನು ಬಿತ್ತುವ ಕೇಂದ್ರವಾಗಿ ಕಾಣುತ್ತದೆ. ಹಾಗಾಗಿ ಇದು ಮತಾಂತರವನ್ನು ಬೇರೆಯದೇ ಆದ ನೆಲೆಯಲ್ಲಿ ಅರ್ಥೈಸುತ್ತದೆ. ಇಲ್ಲಿ ಅಂಬೇಡ್ಕರರು ಮತಾಂತರ ಪ್ರಕ್ರಿಯೆಯನ್ನು ದಲಿತರ ಪಾಲಿನ ಬಿಡುಗಡೆಯ ಅಸ್ತ್ರ ಹಾಗೂ ಅದೊಂದು ಶಕ್ತಿಯ ಕೇಂದ್ರ ಎಂದು ನೋಡಿದ್ದರು. ಅದಕ್ಕಾಗಿ ಅವರು ಸಹಸ್ರಾರು ಬೆಂಬಲಿಗರೊಂದಿಗೆ ಬೌದ್ಧಧರ್ಮಕ್ಕೆ ಮತಾಂತರವಾಗಿದ್ದರು. ಧಾರ್ಮಿಕವಾಗಿ

ಪ್ರತಿಯೊಬ್ಬ ವ್ಯಕ್ತಿ ಹಾಗೂ ಸಮುದಾಯಗಳು ಆಯ್ಕೆಯ ಸ್ವಾತಂತ್ರ್ಯವನ್ನು ಹೊಂದಿರುತ್ತದೆ ಎಂದು ಹೇಳಿದ್ದರು. ಕುಸುಮಬಾಲೆಯೂ ಈ ಅಭಿಪ್ರಾಯವನ್ನೇ ಅಭಿವ್ಯಕ್ತಿಸುತ್ತದೆ.

'ಆವರಣ' ಹಾಗೂ 'ಕುಸುಮಬಾಲೆ' ಕಾದಂಬರಿಗಳು ಹೊಂದಿರುವ ಭಿನ್ನ ಆತಂಕ ಕೇಂದ್ರಗಳು ಮತಾಂತರವನ್ನು ತಡೆಯುವ ಹಾಗೂ ಪ್ರೋತ್ಸಾಹಿಸುವ ಮಾದರಿಗಳಾಗಿ ರೂಪುಗೊಳ್ಳುತ್ತವೆ. ಇವು ಆಯ್ದುಕೊಳ್ಳುವ ಕಥಾಪರಿಸರದ ಸಾಮಾಜಿಕ ವಾಸ್ತವಗಳು ಮತಾಂತರಕ್ಕೆ ಭಿನ್ನ ಪ್ರತಿಕ್ರಿಯೆಗಳನ್ನು ತೋರುವಂತೆ ಮಾಡುತ್ತದೆ. ಇದಕ್ಕೆ ಪೂರಕವಾಗುವ ಸಾಮಾಜಿಕ ಪರಿಸರವೊಂದು ಸಾಹಿತ್ಯದ ಹುಟಿಗೆ ಕಾರಣವಾಗುವ ಬಗೆಯನ್ನು ಶೋಧಿಸಬಹುದೆನಿಸುತ್ತದೆ.

**೨. ಸಾಮಾಜಿಕ ವಿದ್ಯಮಾನಗಳು**

ಇತ್ತೀಚೆಗೆ ಪರಸ್ಪರ ವಿರುದ್ಧವೆನಿಸಬಹುದಾದ ಎರಡು ವಿದ್ಯಮಾನಗಳು ಜರುಗಿದವು. ಮೊದಲನೆಯದು, ದಲಿತ ಸಮುದಾಯ ಸಾಮೂಹಿಕವಾಗಿ ಬೌದ್ಧಧರ್ಮ ಸ್ವೀಕಾರ ಮಾಡಿದ್ದು, ಎರಡನೆಯದು, ಹಿಂದೂ ಧರ್ಮೀಯರನ್ನು ಆಮಿಶವೊಡ್ಡಿ ಹಾಗೂ ಬಲಾತ್ಕಾರದಿಂದ ಮತಾಂತರ ಮಾಡಲಾಗುತ್ತಿದೆಯೆಂದು ಚರ್ಚ್‌ಗಳ ಮೇಲೆ ದಾಳಿ ಮಾಡಿದ್ದು. ಈ ಎರಡೂ ವಿದ್ಯಮಾನಗಳಿಗೆ ತಮ್ಮದೇ ಆದ ಕಾರಣಗಳಿವೆ. ಮೊದಲನೆಯ ವಿದ್ಯಮಾನಕ್ಕೆ ಹಿಂದೂ ಧರ್ಮದೊಳಗಿನ ಅಸ್ಪೃಶ್ಯತೆಯು ಇಲ್ಲಿಂದ ಬಿಡುಗಡೆಗೊಳ್ಳುವ ಸಾಧನೆಯಾಗಿ ಮತಾಂತರಗೊಳ್ಳುವಂತಹದ್ದು. ಇದು ಡಾ॥ ಬಿ.ಆರ್.ಅಂಬೇಡ್ಕರ್ ರಿಂದ ಪ್ರಭಾವಗೊಂಡು ಜರುಗಿದ ವಿದ್ಯಾಮಾನ. ಅಂಬೇಡ್ಕರರು ಹಿಂದೂ ಧರ್ಮದಲ್ಲಿನ ಜಾತಿಯ ಏಣಿಶ್ರೇಣೀಕರಣವನ್ನು ವಿರೋಧಿಸಿ ಬೌದ್ಧಧರ್ಮಕ್ಕೆ ಮತಾಂತರಗೊಂಡರು. ಅವರು "ನಾನು ಹಿಂದೂವಾಗಿ ಹುಟ್ಟಿದ್ದೇನೆ, ಆದರೆ ಹಿಂದೂವಾಗಿ ಸಾಯಲಾರೆ" ಎಂದು ಪ್ರತಿಪಾದಿಸಲು ಇಲ್ಲಿನ ಜಾತಿ ಅಸಮಾನತೆಗಳು ಕಾರಣವಾಗಿದ್ದವು. ಹಾಗಾಗಿ ಇಂದು ದಲಿತರು ಸಾಂಕೇತಿಕವಾಗಿ ಬೌದ್ಧಧರ್ಮಕ್ಕೆ ಮತಾಂತರಗೊಳ್ಳುವ ಹಿಂದಿನ ಪ್ರೇರಣೆ ಅಂಬೇಡ್ಕರರೇ ಆಗಿದ್ದಾರೆ.

ಎರಡನೆಯ ವಿದ್ಯಾಮಾನವಾದ ಚರ್ಚ್‌ಗಳ ಮೇಲಿನ ದಾಳಿಗೆ ಸಮಾಜದಲ್ಲಿ ಕೋಮುವಾದ ಪ್ರೇರೇಪಣೆಗಳನ್ನು ನೀಡುತ್ತದೆ. ಕೋಮುವಾದವು ಭಾರತವನ್ನು

ಹಿಂದೂ ರಾಷ್ಟ್ರ ಎಂದು ಪ್ರತಿಪಾದಿಸುತ್ತಾ ಇಲ್ಲಿನ ಅಲ್ಪಸಂಖ್ಯಾತ ಸಮುದಾಯಗಳನ್ನು ತನ್ನ ಶತ್ರು ಎಂದು ಪ್ರತಿಪಾದಿಸುತ್ತದೆ. ಅದಕ್ಕಾಗಿ ಅದು ಸ್ವದೇಶಿ, ಸ್ವಧರ್ಮ, ಹಾಗೂ ಸ್ವರಾಷ್ಟ್ರಗಳೆಂಬ ಪರಿಕಲ್ಪನೆಗಳನ್ನು ಪ್ರತಿಪಾದಿಸುತ್ತದೆ. ಈ ಸಿದ್ಧಾಂತದ ಪ್ರೇರಣೆ ವರ್ತಮಾನದಲ್ಲಿ ಮುಸ್ಲಿಮರ ಮೇಲೆ ದಾಳಿ, ಕ್ರಿಶ್ಚಿಯನ್ನರ ಮೇಲಿನ ದಾಳಿಗಳಿಗೆ ಕಾರಣವಾಗುತ್ತಿದೆ.

ಈ ಎರಡೂ ವಿದ್ಯಾಮಾನಗಳಿಗೆ ಪ್ರೇರೇಪಣೆ ನೀಡಿರುವ ಕೆಲವು ಘಟನೆಗಳನ್ನು ಚರ್ಚಿಸಬಹುದೆನಿಸುತ್ತದೆ.

೧೯೮೭ ರ ಆಗಸ್ಟ್‌ನಲ್ಲಿ ಬೆಳಗಾವಿ ತಾಲ್ಲೂಕಿನ ಬೆಂಟಗೇರಿಯಲ್ಲಿ ಮೇಲ್ಜಾತಿಗೆ ಸೇರಿದವರ ಹೊಲಗಳಲ್ಲಿ ದಲಿತರು ತಮ್ಮ ದನಗಳಿಗೆ ಮೇವು ಕೊಯ್ದರೆಂಬ ಕಾರಣಕ್ಕಾಗಿ ದಲಿತರಿಗೆ ಮಲ ತಿನ್ನಿಸಲಾಯಿತು. ಅದೇ ರೀತಿ ೨೦೦೦ನೇ ಇಸವಿಯ ಮಾರ್ಚ್ ೧೧ ರಂದು ಕಂಬಾಲಪಲ್ಲಿಯಲ್ಲಿ ೭ ದಲಿತ ಕುಟುಂಬಗಳನ್ನು ಜೀವಸಹಿತ ಸುಡಲಾಯಿತು. ಇತ್ತೀಚೆಗೆ ಮಾಗಡಿಯಲ್ಲಿ ದಲಿತ ಹೆಣ್ಣುಮಗಳು ಸವರ್ಣೀಯರ ನಲ್ಲಿಯಲ್ಲಿ ನೀರು ಹಿಡಿದ ಕಾರಣಕ್ಕಾಗಿ ಅವಳನ್ನು ಹಿಂಸಿಸಲಾಯಿತು. ಅದೇ ರೀತಿಯಾಗಿ ಸವರ್ಣೀಯರ ಮೇಲೆ ಪೊಲೀಸ್ ದೂರು ಕೊಡಲಾಗಿದೆಯೆಂದು ಗದಗದ ಜಗಳೂರಿನ ದಲಿತರಿಗೆ ಸಾಮಾಜಿಕ ಬಹಿಸ್ಕಾರ ಹಾಕಲಾಯಿತು. ಈ ಎಲ್ಲಾ ಘಟನೆಗಳು ಇಂದಿಗೂ ಹಿಂದೂಧರ್ಮ ದಲಿತರ ಪಾಲಿಗೆ ಅಸಮಾನತೆಯ ಕ್ರೌರ್ಯ ವ್ಯವಸ್ಥೆಯಾಗಿ ಕಾಣುವಂತೆ ಮಾಡುತ್ತದೆ. ಡಾ॥ ಡಿ.ಆರ್.ನಾಗರಾಜರು ಸಾಂಪ್ರದಾಯಕ ಸಮಾಜ ಜಾತಿ ಹಿಂಸೆಗೆ ಸಂಬಂಧಿಸಿದಂತೆ ತನ್ನ ರೂಪಗಳನ್ನು ಇಂದಿಗೂ ಹೇಗೆ ವ್ಯಾಪಿಸಿಕೊಂಡಿದೆ ಎಂದು ಚರ್ಚಿಸುತ್ತಾ "ಈ ನಾಡಿನಲ್ಲಿ ದಲಿತರ ಮೇಲಾಗುತ್ತಿರುವ ಹಲ್ಲೆಯನ್ನು ವರ್ಗೀಕರಿಸಿದರೆ ಎರಡು ರೀತಿಯ ಮಾದರಿಗಳು ಹೊರಬೀಳುತ್ತವೆ. ಮೊದಲನೆಯದು, ಸಾಂಪ್ರದಾಯಿಕ ಭಾರತೀಯ ಗ್ರಾಮದ ನ್ಯಾಯದ ಪರಿಕಲ್ಪನೆಗೆ ಸಂಬಂಧಿಸಿದ್ದು, ಎರಡನೆಯದು, ದಲಿತರು ಸಾಂಪ್ರದಾಯಿಕ ಭಾರತೀಯ ಹಳ್ಳಿಗೆ ಗೊತ್ತಿರದಿದ್ದ, ಒಪ್ಪಿಕೊಳ್ಳದಿದ್ದ ಹೊಸ ಹಕ್ಕುಗಳನ್ನು ಪಡೆಯಲು ಹೊರಟಾಗ ಹುಟ್ಟುವ ಹಲ್ಲೆಗಳು. ಈ ಎರಡೂ ರೂಪಕಗಳು ಸಂಪೂರ್ಣವಾಗಿ ಬೇರೆ ಬೇರೆ ಎಂದೇನೂ ಅಲ್ಲ. ಅನೇಕ ಸಾರಿ ಒಂದರೊಳಗೊಂದು ಬೆರೆತೇ ಕಾಣಿಸಿಕೊಳ್ಳುತ್ತದೆ ಎನ್ನುವುದು

ನಿಜವಾದರೂ, ಎರಡರ ಮೂಲಧಾತು ಬೇರೆ ಬೇರೆ. ಮೊದಲ ರೀತಿಯ ಹಲ್ಲೆಗಳು ದಲಿತ ಚಳುವಳಿಯ ಹುಟ್ಟಿಗೆ ಬೀಜರೂಪವಾದರೆ, ಎರಡನೆಯದು, ಹೊಸಬಗೆಯ ಎಚ್ಚರ, ಸಂಘಟನೆಗಳೇ ಕಾರಣವಾಗಿ ಹಲ್ಲೆ ಆಗುತ್ತದೆ. ಅಂದರೆ, ಮೊದಲ ರೂಪದಲ್ಲಿ ಹಲ್ಲೆಗಳೇ ಹೋರಾಟಕ್ಕೆ, ಚಳುವಳಿಗೆ ನಾಂದಿಯಾಗುತ್ತದೆ. ಎರಡನೆಯದರಲ್ಲಿ ಹೋರಾಟವೇ ಹಲ್ಲೆಗೆ ಕಾರಣವಾಗುತ್ತದೆ". ಎಂದು ಹೇಳುತ್ತಾರೆ. ಇಂದಿಗೂ ನಿಲ್ಲದ ಸಾಂಪ್ರದಾಯಿಕ ವೈದಿಕ ಮೌಲ್ಯಗಳ ಕ್ರೌರ್ಯಕ್ಕೆ ಬೇಸತ್ತು ದಲಿತ ಸಮುದಾಯ ಇಲ್ಲಿಂದ ಬಿಡುಗಡೆಗೊಳ್ಳುವ ಮನೋಧರ್ಮವನ್ನು ಪ್ರಕಟಿಸುತ್ತದೆ. ಅದಕ್ಕಾಗಿ ಹಿಂದೂ ಧರ್ಮವನ್ನು ತಿರಸ್ಕರಿಸಿ ಬೇರೆ ಧರ್ಮಗಳ ಸ್ವೀಕಾರ ಕಾರ್ಯದಲ್ಲಿ ತೊಡಗುತ್ತವೆ. ಇಂತಹ ಸಾಮಾಜಿಕ ವಾಸ್ತವಗಳು ಕುಸುಮಬಾಲೆಯಂತಹ ಕೃತಿಗಳ ಹುಟ್ಟಿಗೆ ಆಕೃತಿಯನ್ನು ರೂಪಿಸುತ್ತವೆ. ಹಿಂದೂ ಧರ್ಮದಲ್ಲಿನ ಜಾತಿಯ ಅಸಮಾನತೆಗಳಿಗೆ ಬೇಸತ್ತು ಹಾಗೂ ಅದರ ಯಥಾಸ್ಥಿತಿ ವಾದವನ್ನು ವಿರೋಧಿಸಿ ದಲಿತರು ಬೌದ್ಧಧರ್ಮಕ್ಕೆ ಮತಾಂತರವಾಗುವುದಕ್ಕೆ ಮುಖ್ಯ ಸಂಕೇತವಾಗಿ ನಟರಾಜ್ ಹುಳಿಯಾರರ "ಫಾಲ್ಸ್‌ಸರ್ಟಿಫಿಕೇಟ್" ಕಥೆಯನ್ನು ಮತ್ತಮ ಉದಾಹರಣೆಯಾಗಿ ನೋಡಬಹುದಾಗಿದೆ. ಅದು ದಲಿತ ಸಮುದಾಯ ಸಾಂಕೇತಿಕವಾಗಿ ಬೌದ್ಧಧರ್ಮಕ್ಕೆ ಮತಾಂತರ ಹೊಂದಿದ ವಿದ್ಯಾಮಾನದ ಸಾಹಿತ್ಯದ ಪ್ರತಿಕ್ರಿಯೆಯೆಂದು ಹೇಳಬಹುದಾಗಿದೆ.

ಹಿಂದೂ ಧರ್ಮದೊಳಗಿನ ಜಾತಿಪದ್ಧತಿಯ ವಿರುದ್ಧದ ಕ್ರೌರ್ಯಗಳ ಪ್ರತಿರೂಪವಾಗಿ ರೂಪುಗೊಂಡಿರುವ ಸಾಮಾಜಿಕ ವಿದ್ಯಮಾನಗಳು ಹಾಗೂ ಅದರಿಂದ ಬಿಡುಗಡೆಗೊಳ್ಳುವ ಸಾಧನವಾಗಿ ದಲಿತ ಸಮುದಾಯ ಮತಾಂತರ ಪ್ರಕ್ರಿಯೆಯಲ್ಲಿ ತೊಡಗುವುದನ್ನು ಕಾಣಬಹುದು. ಇದಕ್ಕೆ ತದ್ವಿರುದ್ಧವಾದ ಸಾಮಾಜಿಕ ವಿದ್ಯಮಾನಗಳು ಕಳೆದ ದಶಕಗಳಲ್ಲಿ ನಡೆದಿರುವುದನ್ನು ಚರ್ಚಿಸುವುದು. ೧೯೨೫ ರಿಂದಲೂ ಸಾಂಸ್ಕೃತಿಕ ರಾಷ್ಟ್ರೀಯತೆಯ ಹೆಸರಿನಲ್ಲಿ ಬೆಳೆಯುತ್ತಾ ಬಂದ ಆರ್.ಎಸ್.ಎಸ್, ಬಜರಂಗದಳದಂತಹ ಹಿಂದೂ ರಾಷ್ಟ್ರೀಯವಾದಿ ಸಂಘಟನೆಗಳು ತಮ್ಮ ರಾಜಕೀಯ ಉದ್ದೇಶಗಳಿಗಾಗಿ ರಾಮಜನ್ಮ ಭೂಮಿ ವಿವಾದವನ್ನು ಹುಟ್ಟುಹಾಕಿದವು. ಇದರ ಫಲವಾಗಿ ೧೯೯೧ ರಲ್ಲಿ ಅಯೋಧ್ಯೆಯಲ್ಲಿ ಬಾಬ್ರಿ ಮಸೀದಿಯನ್ನು ಧ್ವಂಶ ಮಾಡಿ ಅಲ್ಲಿ ರಾಮಮಂದಿರ ನಿರ್ಮಾಣದ ಸಂಕಲ್ಪವನ್ನು ತೊಟ್ಟವು. ಇದು ಪ್ರಸ್ತುತ

ಕೋಮುವಾದವು ವ್ಯಾಪಕವಾಗಿ ಬೆಳೆದು ಬಂದದ್ದಕ್ಕೆ ಉದಾಹರಣೆ. ಅನಂತರ ೨೦೦೧ ರಲ್ಲಿ ಕೋಮುವಾದಿ ಸಂಘಟನೆಗಳು ಗುಜರಾತಿನಲ್ಲಿ ನಡೆದ ಗೋದ್ರಾ ಹತ್ಯಾಕಾಂಡದಲ್ಲಿ ಸಾವಿರಾರು ಮುಸ್ಲಿಮ್ ಕುಟುಂಬಗಳ ಮೇಲೆ ಹಲ್ಲೆ ಮಾಡಲಾಯಿತು. ಸಾರ್ವಜನಿಕವಾಗಿ ಮಹಿಳೆಯರ ಮೇಲೆ ಅತ್ಯಾಚಾರ ಮಾಡಲಾಯಿತು. ಇಂತಹ ಪ್ರಮುಖ ಘಟನೆಗಳಿಂದ ಕೋಮುವಾದಿ ರಾಜಕೀಯ ಪಕ್ಷಗಳು ಸದೃಢವಾಗುತ್ತಾ ಸಾಗಿದ್ದನ್ನು ನೋಡಬಹುದು. ಆನಂತರ ಅದು ತುಂಬಾ ವ್ಯಾಪಕವಾಗಿ ಇತ್ತೀಚೆಗೆ ನಡೆಸಿದ ಚರ್ಚ್‌ಗಳ ಮೇಲಿನ ದಾಳಿಗಳನ್ನು ಗಮನಿಸಬಹುದು.

ಮೇಲಿನ ದಾಳಿಗಳಿಗೆ ಪೂರಕವಾಗಿ ಒಂದು ಸಿದ್ಧಾಂತವನ್ನು ರೂಪಿಸಲಾಯಿತು. ಅದೇನೆಂದರೆ ಚಾರಿತ್ರೆಯಲ್ಲಿ ಹಾಗೂ ವರ್ತಮಾನದಲ್ಲಿ ಅನ್ಯಧರ್ಮಗಳ ಅಕ್ರಮಣಗಳಿಗೆ ಹಿಂದೂಧರ್ಮ ತುತ್ತಾಗಿ ನರಳಿದೆ. ಹಿಂದೂಧರ್ಮ ಚರಿತ್ರೆಯುದ್ದಕ್ಕೂ ಆತಂಕದಲ್ಲಿಯೇ ಬೆಳೆದು ಬಂದದ್ದಾಗಿದೆ. ಹಾಗಾಗಿ ಹಿಂದೂ ಧರ್ಮವನ್ನು ರಕ್ಷಿಸಬೇಕಿದೆ ಎಂಬ ಸಿದ್ಧಾಂತವನ್ನು ಕೋಮುವಾದ ಅಲ್ಪಸಂಖ್ಯಾತ ಸಮುದಾಯಗಳ ಮೇಲಿನ ಹಲ್ಲೆಗಳಿಗೆ ಪೂರಕವಗಿ ರೂಪಿಸುತ್ತಾ ಬಂದಿರುವುದನ್ನು ಕಾಣಬಹುದು. ಇಂತಹ ಪ್ರಕ್ರಿಯೆಗಳಿಗೆ ಚಿದಾನಂದಮೂರ್ತಿಯಂತಹ ಸಂಶೋಧಕರು ಹಿಂದೂ ಧರ್ಮದ ಅನ್ಯಧರ್ಮಗಳ ಆಕ್ರಮಣಕ್ಕೆ ಒಳಗಾಗಿರುವ ಚರಿತ್ರೆಯನ್ನು ಶೋಧಿಸತೊಡಗಿದರು. ಈ ಸಾಮಾಜಿಕ ವಿದ್ಯಮಾನಗಳು ಆವರಣದಂತಹ ಕಾದಂಬರಿಗಳಿಗೆ ವಸ್ತುಗಳಾಗಿರುವುದನ್ನು ಗಮನಿಸಬಹುದು.

ಕೋಮುವಾದಿ ಸಂಘಟನೆಗಳ ಆತಂಕಿತ ನೆಲೆಯಿರುವುದು ಏಕಮುಖೀ ಕಲ್ಪನೆಯಲ್ಲಿ, ಅದು ಚಾರಿತ್ರಿಕವಾಗಿ ನಡೆದಿರಬಹುದಾದ ವಾಸ್ತವಗಳನ್ನು ದಾಖಲಿಸುತ್ತದಾದರೂ ಏಕಮುಖಿ ನೆಲೆಗಳಲ್ಲಿ ತನ್ನ ಶೋಧವನ್ನು ಮಾಡುತ್ತದೆ. ಅದಕ್ಕೆ ಅನ್ಯಧರ್ಮಗಳ ಆಕ್ರಮಣಗಳಷ್ಟು ತೀವ್ರವಾಗಿ ತನ್ನದೇ ಧರ್ಮದೊಳಗಿನ ಕ್ರೌರ್ಯಗಳು ಕಾಣುವುದಿಲ್ಲ. ಹಾಗಾಗಿ ಪ್ರಸ್ತುತ ಮತಾಂತರದ ಚರ್ಚೆಯಲ್ಲಿ ಈ ಚಿಂತನೆಯ ವ್ಯಾಪಕತೆ ಸೀಮಿತವಾದದ್ದಾಗಿದೆ.

ಪ್ರತಿಯೊಂದು ಕಾಲಘಟ್ಟದ ಸಾಮಾಜಿಕ ವಿದ್ಯಮಾನಗಳು ಆಕಾಲದ ಸಾಹಿತ್ಯ ಕೃತಿಗಳಲ್ಲಿ ಪ್ರತಿಫಲನಗೊಳ್ಳುತ್ತವೆ. ಹಾಗೆಯೇ ಈ ಕಾಲದ ಭಿನ್ನ ಸಾಮಾಜಿಕ ವಿದ್ಯಮಾನಗಳು 'ಆವರಣ' ದಂತಹ 'ಕುಸುಮಬಾಲೆಯಂತಹ' ಕಾದಂಬರಿಗಳಲ್ಲಿ ಹಾಗೂ 'ಫಾಲ್ಸ್' ಸರ್ಟಿಪಿಕೇಟ್' ನಂತರ ಕಥೆಗಳಲ್ಲಿ ವ್ಯಕ್ತವಾಗುತ್ತವೆ. ಆದರೆ ನವೋದಯ ಕಾಲಘಟ್ಟದ ಸಾಹಿತ್ಯವನ್ನು ವರ್ತಮಾನದೊಂದಿಗೆ ಮುಖಾಮುಖಿ ಮಾಡಿದರೆ ಆ ಕಾಲಘಟ್ಟದ ಭಿನ್ನ ಒತ್ತಡಗಳು ವರ್ತಮಾನದಲ್ಲಿಲ್ಲವೆಂದು ಕಾಣುತ್ತದೆ. ಆದರೂ ಆ ಕಾಲಘಟ್ಟದಲ್ಲಿನ ಸ್ಪೇಸ್ ಈ ಕಾಲಘಟ್ಟದ ಸಾಹಿತ್ಯಕ್ಕಿಲ್ಲ ಎಂಬುದನ್ನು ನೋಡಬಹುದಾಗಿದೆ.

## ಟಿಪ್ಪಣಿಗಳು

೧. ವಸಾಹತುಶಾಹಿ ಅನುಭವ ಮತ್ತು ಕನ್ನಡ ಕಾದಂಬರಿಗಳೂ, ಪುಟ-೧೦೧

೨. ಸಂಸ್ಕೃತಿ ಕಥನ, ಪುಟ-೨೩೬

೩. ಅದೇ ಪುಟ-೨೩೭

೪. ಮತಾಂತರ ಸತ್ಯದ ಮೇಲೆ ಹಲ್ಲೆ, ಪುಟ-೧

# ಅಧ್ಯಾಯ–೬

# ಸಮಾರೋಪ

'ನವೋದಯ ಕಾದಂಬರಿಗಳಲ್ಲಿ ಮತಾಂತರದ ಚರ್ಚೆ' ಎಂಬ ವಿಷಯವನ್ನು ಕನ್ನಡ ನವೋದಯದ ಕೆಲವು ಕಾದಂಬರಿಗಳ ಮೂಲಕ ವಿಶ್ಲೇಷಣೆ ಮಾಡಲಾಗಿದೆ. ನವೋದಯ ಪೂರ್ವ ಕನ್ನಡ ಸಂದರ್ಭದಲ್ಲಿ ಹೊಸ ಸಂಸ್ಕೃತಿಯೊಂದರ ಆಗಮನದಿಂದ ಏರ್ಪಟ್ಟ ಸ್ಥಿತ್ಯಂತರಗಳನ್ನು ಗುರ್ತಿಸುವುದರ ಮೂಲಕ ಮತಾಂತರದ ಚರ್ಚೆಯನ್ನು ಈ ನಿಬಂಧದಲ್ಲಿ ಮಾಡಲಾಗಿದೆ. ಈ ಮೂಲಕ ವರ್ತಮಾನದಲ್ಲಿ ನಡೆಯುತ್ತಿರುವ ಮತಾಂತರ ಚರ್ಚೆಗೆ ನವೋದಯ ಸಾಹಿತ್ಯ ಸಂದರ್ಭದ ಚರ್ಚೆಯನ್ನು ಮುಖಾಮುಖಿ ಮಾಡಲಾಗಿದೆ.

ಹದಿನೇಳು ಹದಿನೆಂಟನೇ ಶತಮಾನದಿಂದ ಭಾರತಕ್ಕೆ ಸ್ವಾತಂತ್ರ್ಯ ದೊರಕುವವರಿಗೂ ಅಸ್ತಿತ್ವದಲ್ಲಿದ್ದ ವಸಾಹತುಶಾಹಿ ಮೂರ್ಕವಾಗಿ ತನ್ನ ಅನುಭವಗಳನ್ನು ಭಾರತೀಯ ಸಮಾಜದ ಮೇಲೆ ಬಿಟ್ಟು ಹೋಗಿದೆ. ಈ ಸಮಾಜದ ಮೇಲೆ ಅದರ ಒಟ್ಟು ಪ್ರಭಾವಗಳನ್ನು ಗುರ್ತಿಸುವ ಪ್ರಯತ್ನಗಳು ಇದುವರೆವಿಗೂ ಹಲವು ನೆಲೆಗಳಲ್ಲಿ ನಡೆದಿದೆಯಾದರೂ, ಇನ್ನೂ ಅದರ ಸಮಷ್ಟಿ ಪ್ರಭಾವವನ್ನು ನಮಗೆ ಕಂಡುಕೊಳ್ಳಲು ಸಾಧ್ಯವಾಗಿಲ್ಲ. ಆರಂಭದಲ್ಲಿ ವಸಾಹತುಶಾಹಿ ತಂದ ಆಧುನಿಕತೆ, ರಾಷ್ಟ್ರೀಯತೆ, ಶಿಕ್ಷಣ ಪದ್ಧತಿ, ವೈಚಾರಿಕತೆ, ವೈಜ್ಞಾನಿಕತೆಗಳೆಲ್ಲವೂ ಆಶಾದಾಯಕವಾಗಿ ಕಂಡಿದ್ದವು. ಆದರೆ ಇಂದು ಇವು ಸಂಸ್ಕೃತಿಗಳ ಮೇಲೆ ನೇತ್ಯಾತ್ಮಕ ಪರಿಣಾಮಗಳನ್ನು ಬೀರುವಷ್ಟು ಪರಿವರ್ತನೆಯಾಗಿವೆ. ಪ್ರಸ್ತುತ ಇಂಗ್ಲೀಷ್ ಮಾಧ್ಯಮವು ಸೃಷ್ಟಿಸುತ್ತಿರುವ ದ್ವಂದ್ವಗಳನ್ನು ಗಮನಿಸಿದರೆ ಇದು ಅರ್ಥವಾಗುತ್ತದೆ. ಹಾಗಾಗಿ ವಸಾಹತುಶಾಹಿಯು ತಂದ ಪರಿವರ್ತನೆಗಳನ್ನು ಇಂದು ಬೇರೆಯದೇ ನೋಟ ಕ್ರಮದಲ್ಲಿ ಅರ್ಥೈಸಿಕೊಳ್ಳಬೇಕಾಗುತ್ತದೆ.

ವರ್ತಮಾನದಲ್ಲಿನ ಮತಾಂತರ ಚರ್ಚೆಯಲ್ಲಿ ಪರ–ವಿರೋಧಗಳ ಸರಳೀಕೃತ ನೆಲೆಯಲ್ಲಿ ನಡೆಯುತ್ತಿರುವುದನ್ನು ನವೋದಯ ಕಾಲಘಟ್ಟ ಈ ಪ್ರಕ್ರಿಯೆಗೆ ಪ್ರತಿಕ್ರಿಯಿಸಿರುವ ನೆಲೆಗಳನ್ನು ಈ ಅಧ್ಯಯನದಲ್ಲಿ ಹುಡುಕಲಾಗಿದೆ. ನವೋದಯ ಕಾದಂಬರಿಗಳು ಮತಾಂತರಕ್ಕೆ ಸಂಬಂಧಿಸಿದಂತೆ ಸ್ವಮತವನ್ನು ಹೊಗಳುವುದರಲ್ಲಿ

ನಡೆಯದೆ ಇಲ್ಲಿನ ಸ್ಥಳೀಯ ಧರ್ಮ, ಪರಧರ್ಮಗಳೆರಡರಲ್ಲಿಯೂ ಇದ್ದ ತೊಡಕುಗಳನ್ನು ಅದು ಚರ್ಚಿಸುತ್ತದೆ. ಹಾಗಾಗಿ ನವೋದಯ ಲೇಖಕರಿಗೆ ಮತಾಂತರ ಕುರಿತಂತೆ ಪರ-ವಿರೋಧದ ಸರಳೀಕೃತ ನೆಲೆಗಳಿಲ್ಲ. ಈ ವಿದ್ಯಮಾನದ ಸಂಕೀರ್ಣತೆಯನ್ನು ಎಲ್ಲ ಸ್ತರಗಳಲ್ಲೂ ಗಮನಿಸಲು ಪ್ರಯತ್ನಿಸುತ್ತಾರೆ. ಆಮಿಷಗಳ ಮೂಲಕ ಇಲ್ಲಿನ ಜನಸಮುದಾಯಗಳನ್ನು ಮತಾಂತರಗೊಳಿಸುವುದನ್ನು ಇವರು ಒಪ್ಪುವುದಿಲ್ಲ. ಆದರೆ ಮತಾಂತರದಿಂದ ಮೂಡಿ ಬರುವ ಸಾಮಾಜಿಕ ಚಲನೆ-ತಿಳುವಳಿಕೆ, ಹೊಸ ರೀತಿಯ ಜ್ಞಾನದ ಪ್ರವೇಶಗಳನ್ನು ಸ್ವಾಗತಿಸುತ್ತದೆ. ಕುವೆಂಪುರವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯು ಇಂಥ ಅನುಭವಗಳನ್ನು ಶೋಧಿಸುತ್ತದೆ. ವಸಾಹತುಶಾಹಿಯು ಆಧುನಿಕತೆಯ ಮೂಲಕ ಉಂಟುಮಾಡುತ್ತಿದ್ದ ಬದಲಾವಣೆಗಳಿಗೆ ಭಿನ್ನ ರೀತಿಯಲ್ಲಿ ಈ ಕಾಲಘಟ್ಟ ಪ್ರತಿಕ್ರಿಯಿಸುತ್ತದೆ.

ವಸಾಹತುಶಾಹಿಯನ್ನು ವಿರೋಧಿಸುವಲ್ಲಿ ಭಾವನಾತ್ಮಕ ರಾಷ್ಟ್ರೀಯತೆಯ ಪ್ರಜ್ಞೆಯೊಂದು ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ರೂಪುಗೊಂಡಿತು. ಈ ಆಧುನಿಕ ಪರಿಕಲ್ಪನೆಯು ವಸಾಹತುಶಾಹಿಯಿಂದ ಮೂಡಿದ ಏಕರೂಪಾತ್ಮಕ ರೂಪಗಳಲ್ಲಿ ಒಂದು. ಆದರೂ ರಾಷ್ಟ್ರೀಯತೆಯಲ್ಲಿ ಭಿನ್ನಧಾರೆಗಳಿವೆ. ಇದು ತಿಲಕ್‌ವಾದಿ, ಗಾಂಧಿವಾದಿ ಮತ್ತು ಸಮಾಜವಾದಿ ನೆಲೆಗಳಲ್ಲಿ ಇದುವರೆವಿಗೂ ತನ್ನ ಅಭಿವ್ಯಕ್ತಿಗಳನ್ನು ಸಾಧಿಸಿದೆ. ನವೋದಯ ಕಾದಂಬರಿಗಳಲ್ಲಿ ಗಾಂಧೀವಾದಿ ಹಾಗೂ ಸಮಾಜವಾದಿ ನೆಲೆಗಳಲ್ಲಿ ರಾಷ್ಟ್ರೀಯತೆ ಪ್ರಕಟಗೊಳ್ಳುತ್ತದೆ. ಈ ನೆಲೆಯಲ್ಲಿ ಮತಾಂತರ ಪ್ರಕ್ರಿಯೆಗಳಿಗೆ ಪ್ರತಿಕ್ರಿಯಿಸುವ ನವೋದಯ ಕಾದಂಬರಿಗಳ ಸಾರ್ವತ್ರಿಕ ಮಾನವೀಯತೆಯನ್ನು ಒತ್ತಿ ಹೇಳುತ್ತದೆ. ಹಾಗಾಗಿ ಈ ಕಾದಂಬರಿಗಳಲ್ಲಿ ಮತಾಂತರಕ್ಕೆ ಸಂಬಂಧಿಸಿದಂತೆ ಸೀಮಿತ ವ್ಯಾಪ್ತಿಯ ಪ್ರತಿಕ್ರಿಯೆಗಳು ರೂಪುಗೊಳ್ಳುವುದಿಲ್ಲ.

ವರ್ತಮಾನದ ಮತಾಂತರದ ಚರ್ಚೆಯನ್ನು ಗ್ರಹಿಸಬೇಕಾದ್ದಲ್ಲಿ, ಅದಕ್ಕಿರುವ ಚಾರಿತ್ರಿಕ ಸ್ವರೂಪವನ್ನು ಅರಿಯುವುದು ಮುಖ್ಯವೆಂದು ತಿಳಿದು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಮತಾಂತರದ ಪ್ರತಿಕ್ರಿಯೆಯ ಚಾರಿತ್ರಿಕತೆಯನ್ನು ಮಧ್ಯಕಾಲೀನ ಭಾರತದಿಂದೀಚೆಗೆ ಗುರುತಿಸಲಾಗುತ್ತಿದೆ. ಆದರೆ ಮತಾಂತರಕ್ಕೆ ಭಾರತದ ಆರ್ಯರ ಆಗಮನದಿಂದಲೇ ಆರಂಭವಾಗುತ್ತದೆ. ನಂತರದಲ್ಲಿ ವೈದಿಕ ಶಾಹಿ ವ್ಯವಸ್ಥೆಯನ್ನು ವಿರೋಧಿಸಿ ರೂಪುಗೊಂಡ ಬೌದ್ಧ, ಜೈನ, ವೀರಶೈವ ಧರ್ಮಗಳು ಇಲ್ಲಿನ ಜಾತಿ

ಪದ್ಧತಿಯಿಂದ ಬೇಸತ್ತಿದ್ದ ಜನವರ್ಗಗಳನ್ನು ಮತಾಂತರಗೊಳಿಸುವುದರ ಮೂಲಕ ಮತಾಂತರಕ್ಕೆ ಪ್ರತಿರೋಧದ ಸ್ವರೂಪವನ್ನು ನೀಡಿದವು. ಅನಂತರದಲ್ಲಿ ಮೊಘಲ್ ಹಾಗೂ ವಸಾಹತುಶಾಹಿಗಳು ಮತಾಂತರ ಪ್ರಕ್ರಿಯೆಯನ್ನು ಭಿನ್ನವಾಗಿ ಬಳಸಿಕೊಳ್ಳಲಾಯಿತು. ತಮ್ಮ ಸಾಮ್ರಾಜ್ಯಗಳನ್ನು ಸ್ಥಿರಗೊಳಿಸಿಕೊಳ್ಳಬೇಕಾದ ಸಂದರ್ಭಗಳಲ್ಲಿ ಅವು ಮತಾಂತರದ ಪ್ರಕ್ರಿಯೆಯಲ್ಲಿ ತೊಡಗಿದವು. ಹಾಗಾಗಿ ಮತಾಂತರಕ್ಕಿರುವ ಚಾರಿತ್ರಿಕ ಸ್ವರೂಪವನ್ನು ವಿಶ್ಲೇಷಿಸದೆ ಮತಾಂತರ ಚರ್ಚೆಯು ಪೂರ್ಣಗೊಳ್ಳುವುದಿಲ್ಲ.

ಪ್ರಸ್ತುತ ಮತಾಂತರದ ಚರ್ಚೆಯಲ್ಲಿ ಮತಾಂತರವು ಆಮಿಷ ಹಿಂಸೆ ಹಾಗೂ ಬಲವಂತದಿಂದ ನಡೆಯುತ್ತಿದೆ ಎಂದು ಹೇಳಲಾಗುತ್ತಿದೆ. ಆದರೆ ಯಾವಾಗಲೂ ಹಿಂಸೆ ಹಾಗೂ ಆಮಿಷಗಳಿಂದ ಮಾತ್ರವೇ ಜನ ಮತಾಂತರಗೊಳ್ಳುತ್ತಾರೆ ಎಂದು ಭಾವಿಸುವುದು ತಪ್ಪು. ಇದು ಒಂದು ಕಾರಣವಾಗಿರಬಹುದು ಅಷ್ಟೆ. ವಸಾಹತುಶಾಹಿಯ ಸಂದರ್ಭದಲ್ಲಿ, ಹಾಗೂ ವರ್ತಮಾನದಲ್ಲಿ ಮತಾಂತರ ಗೊಳಿಸುವವರು ನೀಡುವ ಸೇವೆ, ಪ್ರಲೋಭನೆಗಳನ್ನು ಮತಾಂತರಗೊಳ್ಳುವವರು ನಿಸ್ಸಾಹಯಕತೆಯಿಂದ ಸ್ವೀಕರಿಸುತ್ತಾರೆ ಎಂದು ಭಾವಿಸುವುದು ತಪ್ಪು. ಮತಾಂತರ ಮಾಡುವವರದು ಏನೇ ರಾಜಕೀಯವಿದ್ದರೂ ಮತಾಂತರಗೊಳ್ಳುವವರದೂ ಒಂದು ಆಯ್ಕೆಯ ರಾಜಕಾರಣವಿರುತ್ತದೆ. ಆದರೆ ಪ್ರಸ್ತುತ ಮತಾಂತರದ ಚರ್ಚೆ ಈ ಆಯ್ಕೆಯ ರಾಜಕಾರಣವನ್ನು ಮರೆಮಾಚುತ್ತದೆ. ಬದಲಾಗಿ ಮತಾಂತರಗೊಳ್ಳುವವರನ್ನು ಮುಗ್ಧರು, ಅಮಾಯಕರೆಂಬ ಪರಿಭಾಷೆಗಳಲ್ಲಿ ಗುರುತಿಸುತ್ತದೆ. ಇದು ಮತಾಂತರಗೊಳ್ಳುವ ವರ್ಗಗಳನ್ನು ಅವಮಾನಿಸಲಾಗುತ್ತದೆ. ನವೋದಯ ಕಾದಂಬರಿಗಳು ಮತಾಂತರಗೊಳ್ಳುವವರ ಆಯ್ಕೆಯ ಹಿಂದಿರಬಹುದಾದ ರಾಜಕಾರಣಗಳನ್ನೂ ಚರ್ಚಿಸುತ್ತದೆ. ಕುವೆಂಪುರವರ 'ಮಲೆಗಳಲ್ಲಿ ಮದುಮಗಳ' ಕಾದಂಬರಿಯಲ್ಲಿ ಪಾದ್ರಿ ಜೀವನರತ್ನಯ್ಯ ದೇವಯ್ಯನನ್ನು ಮತಾಂತರಗೊಳಿಸುವಲ್ಲಿ ಅನೇಕ ತೊಂದರೆಗಳನ್ನು ಅನುಭವಿಸುತ್ತಾನೆ. ಇವನು ನೇಟಿವ್ ಪಾದ್ರಿಯಾದ್ದರಿಂದ ಜನರಿಗೆ ಆತನ ಬಗ್ಗೆ ಗೌರವಾದರಗಳಿಲ್ಲ. ಅವೆಲ್ಲವೂ ದೊಡ್ಡ ಪಾದ್ರಿಗೆ ಮಾತ್ರ. ಜೀವರತ್ನಯ್ಯ ಉಪದೇಶಿಯಿಂದ ರೆವರೆಂಡ್ ಸ್ಥಾನಕ್ಕೆ ಬಡ್ತಿ ಪಡೆಯಲು ಹಳ್ಳಿಗರ ಜೊತೆ ಹೇಗಿರಬೇಕು ಎಲ್ಲಕ್ಕಿಂತ ಮುಖ್ಯವಾಗಿ ಈತ ಹೆಣ್ಣುಗಳ ತಂದೆ ದೇವಯ್ಯನಿಗೆ ಪಾದ್ರಿಯ ಮಗಳೊಡನೆ ಒಡನಾಟ ಆತನ ಲಂಪಟತನ

ಕಾದಂಬರಿಯ ಇನ್ನೊಂದು ಭಾಗ. ಇಲ್ಲಿ ದೇವಯ್ಯ ಕೂಡ ಮತಾಂತರವಾಗುವ ಪ್ರಕ್ರಿಯೆಯನ್ನು ತನ್ನ ರಾಜಕಾರಣಕ್ಕಾಗಿ ಬಳಸಿಕೊಳ್ಳುತ್ತಾನೆ.

ಒಟ್ಟಾರೆಯಾಗಿ ಈ ಅಧ್ಯಯನದಲ್ಲಿ ಮತಾಂತರದ ಚಾರಿತ್ರಿಕ ಸ್ವರೂಪ, ಅದು ಮಧ್ಯಕಾಲೀನ ಹಾಗೂ ವಸಾಹತುಶಾಹಿ ಸಂದರ್ಭಗಳಲ್ಲಿ ಬದಲಾದ ಸ್ವರೂಪಗಳನ್ನು ಚರ್ಚಿಸಲಾಗಿದೆ. ಈ ಹಿನ್ನೆಲೆಯಿಂದ ನವೋದಯ ಕಾದಂಬರಿಗಳಲ್ಲಿನ ಮತಾಂತರದ ಚರ್ಚೆಯನ್ನು ಅರ್ಥೈಸಲಾಗಿದೆ. ಹಾಗೆಯೇ ನವೋದಯ ಸಂದರ್ಭದ ಚಾರಿತ್ರಿಕ ಒತ್ತಡಗಳು ಹೇಗೆ ಮತಾಂತರ ಪ್ರಕ್ರಿಯೆಗೆ ಪ್ರತಿಕ್ರಿಯಿಸಿದ ರೀತಿಯನ್ನು ಚರ್ಚಿಸಲಾಗಿದೆ. ಕೊನೆಯ ಅಧ್ಯಾಯದಲ್ಲಿ ಮತಾಂತರದ ಚರ್ಚೆ ಪಡೆದುಕೊಂಡಿರುವ ಸ್ವರೂಪವನ್ನು ಹಾಗೂ ಅದರ ಸುತ್ತಲಿನ ವಿದ್ಯಾಮಾನಗಳನ್ನು ಚರ್ಚಿಸಲಾಗಿದೆ. ಈ ಮೂಲಕ ಮತಾಂತರದ ಚರ್ಚೆಗೆ ಭಿನ್ನ ಆಯಾಮಗಳನ್ನು ಈ ಅಧ್ಯಾಯನದಲ್ಲಿ ಕೈಗೊಳ್ಳಲಾಗಿದೆ.

ಪ್ರಸ್ತುತ ಸಂದರ್ಭದಲ್ಲಿ ನಡೆಯುತ್ತಿರುವ ಮತಾಂತರದ ಚರ್ಚೆ ಕೇವಲ ಪರ–ವಿರೋಧಗಳ ಸರಳೀಕೃತ ನೆಲೆಯಲ್ಲಿ ನಡೆಯುತ್ತಿರುವುದನ್ನು ಗಮನಿಸಬಹುದು. ಈ ಚರ್ಚೆಯಲ್ಲಿ ಮತಾಂತರದ ಪರ ಹಾಗೂ ವಿರೋಧಿಸುತ್ತಿರುವ ಚಿಂತನೆಗಳೆರಡೂ ಮತಾಂತರಕ್ಕಿರುವ ಸಾಹಿತ್ಯಿಕ ಪರಂಪರೆಗಳನ್ನು ಗ್ರಹಿಸದೆ ಅತೀ ಎನ್ನಬಹುದಾದಷ್ಟು ಸಾಮಾಜಿಕಗೊಂಡಿವೆ. ಯಾವುದೇ ಕಾಲಘಟ್ಟದ ಸಾಮಾಜಿಕ ವಿದ್ಯಮಾನಕ್ಕೆ ಆ ಕಾಲದ ಸಾಹಿತ್ಯ ಸೂಕ್ಷ್ಮವಾಗಿ ಪ್ರತಿಕ್ರಿಯಿಸುತ್ತದೆ. ಆದ್ದರಿಂದ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮತಾಂತರ ಕುರಿತ ಪ್ರತಿಕ್ರಿಯೆಗಳು ಹೇಗೆ ರೂಪುಗೊಂಡಿವೆ ಎಂಬುದು ಈ ಅಧ್ಯಯನದ ಅಗತ್ಯವಾಗಿದೆ. ಮತಾಂತರಕ್ಕಿರುವ ಭಿನ್ನ ಆಯಾಮಗಳನ್ನು ಭಿನ್ನ ನೆಲೆಗಳಲ್ಲಿ ಚರ್ಚಿಸುವುದನ್ನು ಈ ಅಧ್ಯಯನವು ಒಳಗೊಂಡು ಪ್ರಸ್ತುತ ಮತಾಂತರದ ಚರ್ಚೆಗೆ ಭಿನ್ನ ಆಯಾಮಗಳನ್ನು ನೀಡುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

## ಪರಾಮರ್ಶನ ಗ್ರಂಥಗಳು


೧. ಅಮೃತ ಮತ್ತು ಗರುಡ : ಡಿ.ಆರ್.ನಾಗರಾಜ್ – ಅಕ್ಷರ ಪ್ರಕಾಶನ–೨೦೦೩

೨. ಅವೈದಿಕ ಚಿಂತನೆ : ಡಾ.ಎಚ್.ಟಿ.ಪೋತೆ ತಿಪ್ಪಣ್ಣಂಬು ಪ್ರಕಾಶನ–೨೦೦೪

೩. ಅಂಬೇಡ್ಕರ್ ಮತ್ತು ಗಾಂಧಿ : ಎಸ್.ಚಂದ್ರಶೇಖರ್ – ಅಕ್ಷರ ಪ್ರಕಾಶನ–೧೯೯೨

೪. ಅಸ್ಪೃಶ್ಯರ ವಿಮೋಚನೆ : ಅಂಬೇಡ್ಕರ್ –ಸಂ: ನಟರಾಜ್ ಹುಳಿಯಾರ್ – ಬಾಬಾಸಾಹೇಬ್ ಅಂಬೇಡ್ಕರ್ ಶತಮಾನೋತ್ಸವ ಸಮಿತಿ–೧೯೯೦

೫. ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ: ನಟರಾಜ್ ಹುಳಿಯಾರ್ – ಪ್ರಸಾರಂಗ ಕನ್ನಡ ವಿಶ್ವ ವಿದ್ಯಾಲಯ–೨೦೦೪

೬. ಆವರಣ ಅನಾವರಣ : ಎನ್.ಎಸ್.ಶಂಕರ್ – ಐ.ಬಿ.ಎಚ್.ಪ್ರ. ೨೦೦೭.

೭. 'ಆವರಣ' ಎಂಬ ವಿ–ಕೃತಿ : ವಿಮರ್ಶಾ ಸಂಕಲನ– ಸಂಗ್ರಹ ಗೌರಿಲಂಕೇಶ್ – ಲಂಕೇಶ ಪ್ರಕಾಶನ – ೨೦೦೭

೮. ಇಂದಿರಾಬಾಯಿ : ಗುಲ್ವಾಡಿ ವೆಂಕಟರಾವ್ – ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಾಶನ – ೧೯೮೫

೯. ಕತ್ತಿಯಂಚಿನ ದಾರಿ : ರಹಮತ್ ತರೀಕೆರೆ– ಅಭಿನವ ಪ್ರಕಾಶನ – ೨೦೦೬

೧೦ ಕನ್ನಡದ ಹಾಡು ಪಾಡು : ಕೆ.ಸಿ.ಶಿವಾರೆಡ್ಡಿ – ಅಧ್ಯಯನ ಮಂಡಲ–೨೦೦೩

೧೧. ಕನ್ನಡ ಸಾಹಿತ್ಯ ಮೀಮಾಂಸೆ : ಸಂ.–ಡಾ. ಸಬಿಹಾ ಭೂಮಿಗೌಡ – ಕನ್ನಡ ಸಾಹಿತ್ಯ ಅಕಾಡೆಮಿ–೨೦೦೭

೧೨. ಕನ್ನಡ ರಾಷ್ಟ್ರೀಯತೆ : ಡಾ॥ ಬಂಜಗೆರೆ ಜಯಪ್ರಕಾಶ್– ಕ್ರಾಂತಿಸಿರಿ ಪ್ರಕಾಶನ – ೨೦೦೦

೧೩. ಕನ್ನಡ ಕಥನ ಸಾಹಿತ್ಯ : ಕಾದಂಬರಿ : ಡಾ॥ ಜಿ.ಎಸ್.ಅಮೂರ ಸಪ್ನಬುಕ್ ಹೌಸ್–೨೦೦೬

೧೪. ಕನ್ನಡದ ಕೆಲವು ಪ್ರಮುಖ ಕಾದಂಬರಿಗಳು : ಸಂ.ಜಿ.ಎಸ್. ಶಿವರುದ್ರಪ್ಪ – ೧೯೯೦

೧೫. ಕಾನೂರು ಹೆಗ್ಗಡಿತಿ : ಕುವೆಂಪು – ಉದಯರವಿ ಪ್ರಕಾಶನ–೨೦೦೭

೧೬. ಕುವೆಂಪು : ಪುನರ್ಮನನ : ಸಂ. ಪ್ರೊ.ಅಂಬಳಿಕೆ ಹಿರಿಯಣ್ಣ, ಪ್ರೊ.ನೀಲಗಿರಿ ತಳವಾರ – ಪ್ರಸಾರಂಗ ಮೈಸೂರು ವಿಶ್ವವಿದ್ಯಾಲಯ–೨೦೦೪

೧೭. ಕುವೆಂಪು ಕಾದಂಬರಿ ಎರಡು ಅಧ್ಯಯನಗಳು : ಟಿ.ಪಿ.ಅಶೋಕ ಅಕ್ಷರ ಪ್ರಕಾಶನ–೨೦೦೪

೧೮. ಕುವೆಂಪು ಕಥನ : ಡಾ. ಉದ್ದಂಡಯ್ಯ – ಅಧ್ಯಯನ ಮಂಡಲ–೨೦೦೯

೧೯. ಕುವೆಂಪು –ವಿಚಾರಧಾರೆಯ ಪ್ರಸ್ತುತತೆ : ಸಂ.ಡಾ.ಕೆ.ಸಿ.ಶಿವಾರೆಡ್ಡಿ, ಡಾ.ಎಸ್.ವೈ.ಸೋಮಶೇಖರ್ – ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ–೨೦೦೪.

೨೦. ಕೋಮುವಾದದ ಕರಾಳ ಮುಖಗಳು : ಎಸ್.ರ್.ಭಟ್, ಜಿ.ರಾಜಶೇಖರ್, ಕೆ.ಪಣಿರಾಜ್ – ನವಕರ್ನಾಟಕ ಪ್ರಕಾಶನ – ೨೦೦೫

೨೧. ಕಾಸಗಿ ವಿಮರ್ಶೆ : ಕೆ.ಸತ್ಯನಾರಾಯಣ – ವಸಂತ ಪ್ರಕಾಶನ –೨೦೦೯

೨೨. ಗೊಂದಲಪುರ : ಸಂ. ನ.ರವಿಕುಮಾರ್, ಚಂದ್ರಮಾಗಡಿ –ಅಭಿನವ ಪ್ರಕಾಶನ – ೨೦೦೧.

೨೩. ಗೌತಮ ಬುದ್ಧ ಬೌದ್ಧಧರ್ಮ : ಸಿ.ಎನ್.ಶೆಟ್ಟಿ–ಸಿ.ಎನ್.ಶೆಟ್ಟಿ–೨೦೦೬

೨೪. ಚರಿತ್ರೆ : ಕನ್ನಡ ವಿ.ವಿ.ಕೋಶ ೪–ಸಂ.ಸಂಬಂಡ ವಿಜಯ್ ಪೂಟಚ್ಚ, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ–೨೦೦೧

೨೫. ಚೋಮನದುಡಿ : ಡಾ॥ ಶಿವರಾಮ ಕಾರಂತ, ಎಸ್.ಬಿ.ಎಸ್, ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್–೨೦೦೫

೨೬. ಡಾ॥ ಬಾಬಾಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು' ಸಂಪುಟ ॥, ಭಾಗ–೨ : ಡಾ॥ ಬಿ.ಆರ್.ಅಂಬೇಡ್ಕರ್, – ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು–೧೯೯೯

೨೭. ಡಾ.ಬಿ.ಆರ್.ಅಂಬೇಡ್ಕರ್–ವರ್ತಮಾನದೊಂದಿಗೆ ಮುಖಾಮುಖಿ : ಸಂ.ಡಾ॥ ಬಿ.ಯು.ಸುಮಾ ಪ್ರಕಾಶಕರು ಅಶೋಕ್ ಎನ್.ಚಲವಾದಿ–೨೦೦೮

೨೮. ತಳಮಳದ ಹಾದಿ : ಡಾ.ಆನಂದ್ ಋಗ್ವೇದಿ– ಪಲ್ಲವ ಪ್ರ.–೨೦೦೮

೨೯. ದಲಿತರು ಮತ್ತು ಚರಿತ್ರೆ : ಸಂ : ಡಾ.ವಿರೂಪಾಕ್ಷ ಪೂಜಾರಹಳ್ಳಿ–ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ–೨೦೦೯

೩೦. ಧರ್ಮ ಸಂರಕ್ಷಣೆ : ಮಾಸ್ತಿ ವೆಂಕಟೇಶ್ ಅಯ್ಯಂಗಾರ್–ಮಾಸ್ತಿ ಜೀವನ ಕಾರ್ಯಾಲಯ ಟ್ರಸ್ಟ್–೧೯೮೮

೩೧. ನಡು ಹಗಲಿನಲ್ಲಿ ಕಂದೀಲುಗಳು : ರಾಜೇಂದ್ರ ಚೆನ್ನಿ – ಲೋಹಿಯಾ ಪ್ರಕಾಶನ – ೨೦೦೪.

೩೨. ನೆನಪಿನ ದೋಣಿಯಲ್ಲಿ : ಕುವೆಂಪು – ಉದಯರವಿ ಪ್ರಕಾಶನ – ೨೦೦೭.

೩೩. ಪ್ರಾಚೀನ ಭಾರತದ ಇತಿಹಾಸ : ಟಿ.ಜಿ.ಚಂದ್ರಶೇಖರಪ್ಪ – ಅನ್ನ ಪ್ರಕಾಶನ – ೨೦೦೬

೩೪. ಬಯಲುರೂಪ : ಪ್ರೊ। ಸಿ.ಎನ್.ರಾಮಚಂದ್ರನ್– ಸ್ವಪ್ನಬುಕ್ ಹೌಸ್– ೨೦೦೬

೩೫. ಬಹುಮುಖ : ಎನ್. ಮನುಚಕ್ರವರ್ತಿ ಸಂದರ್ಶನಗಳು ಮತ್ತು ಲೇಖನಗಳು, ಅಕ್ಷರ ಪ್ರಕಾಶನ – ೧೯೯೯.

೩೬. ಬುದ್ಧನ ಧಮ್ಮ ಮತ್ತು ಇತರ ಧರ್ಮಗಳ ಒಂದು ವಿವೇಚನೆ : ಡಾ.ಆರ್.ಓಬಳೇಶ ಘಟ್ಟಿ–ಶಿವಗಂಗಾ ಪ್ರಕಾಶನ–೨೦೦

೩೭. ಬೇರು ಕಾಂಡ ಚಿಗುರು : ಕೆ.ವಿ.ನಾರಾಯಣ– ವಿವೇಕ ಪ್ರಕಾಶನ – ೧೯೯೭

೩೮. ಬ್ರಾಹ್ಮಣ ಧರ್ಮದ ದಿಗ್ವಿಜಯ : ಡಾ॥ ಬಿ.ಆರ್.ಅಂಬೇಡ್ಕರ್, ಕನ್ನಡಕ್ಕೆ ಎನ್.ಎಸ್.ಶಂಕರ್, ಅದಿಮ ಪ್ರಕಾಶನ – ೨೦೦೭

೩೯. ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ : ಭಗವತ್ ಶರಣ ಉಪಧ್ಯಾಯ, ನವಕರ್ನಾಟಕ ಪ್ರಕಾಶನ – ೧೯೭೩

೪೦. ಮಲೆಗಳಲ್ಲಿ ಮದುಮಗಳು : ಕುವೆಂಪು, ಉದಯರವಿ ಪ್ರಕಾಶನ – ೨೦೦೭

೪೧. ಮರದೊಳಗಣ ಕಿಚ್ಚು : ರಹಮತ್ ತರೀಕೆರೆ – ಬೆಳ್ಳಿಚುಕ್ಕಿ ಬುಕ್ ಟ್ರಸ್ಟ್– ೨೦೦೨

೪೨. ಮತಾಂತರ : ಸಂ.ಡಾ.ಪ್ರದಾನ್ ಗುರುದತ್ತ –ಸಾಹಿತ್ಯ ಪ್ರಕಾಶನ – ೨೦೦೮

೪೩. ಮತಾಂತರ : ಸತ್ಯಾನ್ವೇಷಣೆ : ಸಂ.ಚಸರಾ, ಡಾ॥ ಲಕ್ಷ್ಮೀಪತಿ ಸಿ.ಜಿ. ಸಂಚಲನ ಬೆಂಗಳೂರು ಪ್ರಕಾಶನ – ೨೦೦೯.

೪೪. ಮುಸುಗ ತೆಗೆಯೇ ಮಾಯಾಂಗನೆ : ಎಂ.ಎಸ್.ಪುಟ್ಟಣ್ಣ – ಕಾವ್ಯಾಲಯ ಪ್ರಕಾಶನ – ೧೯೨೮

೪೫. ಯುಗಧರ್ಮ ಹಾಗೂ ಸಾಹಿತ್ಯ ದರ್ಶನ : ಕೀರ್ತಿನಾಥ ಕುರ್ತಕೋಟಿ– ಕುರ್ತಕೋಟಿ ಮೆಮೋರಿಯಲ್ ಟ್ರಸ್ಟ್ ಪ್ರಕಾಶನ – ೨೦೦೮

೪೬. ರಾಮಮನೋಹರ ಲೋಹಿಯಾ ಚಿಂತನೆ : ಸಂ.ನಟರಾಜ್ ಹುಳಿಯಾರ್, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ–೨೦೦೮

೪೭. ವಸಾಹತುಶಾಹಿ ಅನುಭವ ಮತ್ತು ಕನ್ನಡ ಕಾದಂಬರಿಗಳು : ಡಾ॥ ಐ.ಜೆ.ಮ್ಯಗೇರಿ, ಕನ್ನಡ ಸಾಹಿತ್ಯ ಪರಿಷತ್ತು -೨೦೦೮

೪೮. ಶಿವರಾಮ ಕಾರಂತ : ಸಂ.ಟಿ.ಪಿ. ಅಶೋಕ, ಕನ್ನಡ ವಿ.ವಿ. ಪ್ರಸಾರಂಗ-೧೯೯೩.

೪೯. ಶಿವರಾಮ ಕಾರಂತ ಎರಡು ಅಧ್ಯಯನಗಳು : ಟಿ.ಪಿ.ಅಶೋಕ- ಅಕ್ಷರ ಪ್ರಕಾಶನ-೧೯೯೨

೫೦. ಶ್ರೀ ಕುವೆಂಪು : ಸಂ: ಜಿ.ಎಸ್.ಶಿವರುದ್ರಪ್ಪ- ಪ್ರಸಾರಂಗ, ಬೆಂಗಳೂರು ವಿಶ್ವವಿದ್ಯಾಲಯ-೨೦೦೩.

೫೧. ಸಂಸ್ಕೃತಿ ಕಥನ : ಡಾ॥ ಡಿ.ಆರ್.ನಾಗರಾಜ್ - ಕನ್ನಡ ಪುಸ್ತಕ ಪ್ರಾಧಿಕಾರ-೨೦೦೨.

೫೨. ಸಣ್ಣಕತೆಗಳು : ಶ್ರೀನಿವಾಸ - ಜೀವನ ಕಾರ್ಯಾಲಯ ಟ್ರಸ್ಟ್ -೨೦೦೬, ೨೦೦೭.

೫೩. ಸನ್ಯಾಸಿ ಮತ್ತು ಇತರ ಕಥೆಗಳು : ಕುವೆಂಪು- ಉದಯರವಿ ಪ್ರಕಾಶನ - ೨೦೦೫

೫೪. ಸಾಹಿತ್ಯ ಕಥನ : ಡಾ॥ ಡಿ.ಆರ್.ನಾಗರಾಜ್ - ಅಕ್ಷರ ಪ್ರಕಾಶನ - ೨೦೦೬.

೫೫. ಸಾಹಿತ್ಯ ವಿಮರ್ಶೆ : ಸಂ. ಮಲ್ಲೇಪುರಂ ಜಿ.ವೆಂಕಟೇಶ್-ಕನ್ನಡ ಸಾಹಿತ್ಯ ಅಕಾಡೆಮಿ-೧೯೯೮.

೫೬. ಸಾಮ್ರಾಜ್ಯ ಏಕತಾಯುಗ, ಸಂಪುಟ-೪: ಸಂ.ಕೆ.ಎಂ. ಮುನ್ಷಿ-ಭಾರತೀಯ ವಿದ್ಯಾಭವನ ಪ್ರಕಾಶನ - ೧೯೯೮.

೫೭. ಸುಬ್ಬಣ್ಣ : ಮಾಸ್ತಿ ವೆಂಕಟೇಶ್ ಅಯ್ಯಂಗಾರ್

೫೮. ಹಿಂದೂಧರ್ಮ : ಡಾ॥ ಎಂ.ಚಿದಾನಂದ ಮೂರ್ತಿ-ಸಾಹಿತ್ಯ ಸಂಗಮ ಪ್ರಕಾಶನ - ೨೦೦೭

೫೯. ಹಿಂದೂ ಸಾಮ್ರಾಜ್ಯಶಾಹಿಯ ಇತಿಹಾಸ : ಸ್ವಾಮಿ ಧರ್ಮತೀರ್ಥ- ಮಹಿಮಾ ಪ್ರಕಾಶನ - ೨೦೦೭

